# ಮೊದಲ ಮಾತು

ಈ ಬಾರಿಯ ಮಾಗಿಯ ಛಳಿ ಎಂದಿಗಿಂತ ಹೆಚ್ಚಾಗಿರುವಂತೆ ಕಾಣುತ್ತದೆ. ಈ ಛಳಿಯಲ್ಲಿ ಹಿತಕರವಾಗಿ ಬಿಸಿಲು ಕಾಯಿಸುವ, ಅಂತೆಯೇ ಬಂಧುಮಿತ್ರರೊಡಗೂಡಿ ನಲಿಯುವ ಅವಕಾಶವೊಂದನ್ನು ನಿಮಗೆ ಕಲ್ಪಿಸುತ್ತಿದ್ದೇವೆ. ಹ್ದಾ, ನಿಮ್ಮ ಊಹೆ ಸರಿ. ಈ ಶತಮಾನದ ಕೊನೆಯ ಹಾಸ್ಯೋತ್ಸವ ಕ್ರಿಸ್‌ಮಸ್ ದಿನದಂದು ಎಚ್.ಎನ್. ಕಲಾಕ್ಷೇತ್ರದಲ್ಲಿ ಎಂದಿನಂತೆ ನಡೆಯಲಿದೆ. ಎಂದಿನಂತೆ ಅಪರಂಜಿಯೂ ಸಹ ಈ ಹಾಸ್ಯೋತ್ಸವದಂದು ವಿಶೇಷ ಉಡುಗೆ ತೊಟ್ಟು ಸಿಂಗಡಿಸಿಕೊಂಡು ನಿಮ್ಮನ್ನೆಲ್ಲಾ ರಂಜಿಸಲು ಸಿದ್ಧಳಾಗಿದ್ದಾಳೆ. ಅಗತ್ಯವಾಗಿ ಬರಮಾಡಿಕೊಳ್ಳಿ.

ಅಂಚೆ ಮುಷ್ಕರದಿಂದಾಗಿ ಡಿಸೆಂಬರ್ ಸಂಚಿಕೆ ನಮ್ಮ ಓದುಗರಿಗೆ ತಲುಪಿಲ್ಲ. ಮುಷ್ಕರ ತೆರವಾದ ತಕ್ಷಣವೇ ಆ ಸಂಚಿಕೆಯನ್ನು ನಿಮಗೆ ತಲುಪಿಸುತ್ತೇವೆ. ಕಳೆದ ಬಾರಿ ಕೊರವಂಜಿಯ ಸಂಚಿಕೆಗಳಿಂದ ಆಯ್ದು ಪೋಣಿಸಿದ ''ಬೆಸ್ಟ್ ಆಫ್ ಕೊರವಂಜಿ''ಯನ್ನು ನಿಮಗೆ ನೀಡಿದ್ದೆವು. ಈಗ ರಾ.ಶಿ.ಯವರ ''ಇಂದಾನೊಂದು ಕಾಲದಲ್ಲಿ'' ಪುಸ್ತಕದಿಂದ ಸಂಗ್ರಹಿಸಿದ ಲೇಖನ ಮಾಲೆಯೊಂದು ''ನೀತಿಯ ಕತೆಗಳು'' ಎಂಬ ಶೀರ್ಷಿಕೆಯಡಿ ಬಿಡುಗಡೆಯಾಗುತ್ತಿದೆ. ಕೊಂಡು ಓದುವ ಕನ್ನಡಿಗರಿಗೆ ಇದೊಂದು ಉತ್ತಮ ಉಡುಗೊರೆ ಎಂಬ ನಂಬಿಕೆ ನಮ್ಮದು.

ಈ ಬಾರಿ ನಮ್ಮ ಹಾಸ್ಯೋತ್ಸವ ವಿಶೇಷಾಂಕಕ್ಕೆ ಲೇಖನಗಳನ್ನು ಆಹ್ವಾನಿಸಿದಾಗ ನಮ್ಮ ನಿರೀಕ್ಷೆಗೆ ಮೀರಿ ಲೇಖನಗಳು ಬರುವುವೆಂದು ಖಂಡಿತ ಊಹಿಸಿರಲಿಲ್ಲ. ಹಾಗಾಗಿ ಹಲವು ಲೇಖನಗಳನ್ನು ಈ ಸಂಚಿಕೆಯಲ್ಲಿ ಅಳವಡಿಸಲು ಸಾಧ್ಯವಾಗಿಲ್ಲ. ಇಂತಹ ಸ್ಪಿಲೋವರ್ ಬರಹಗಳನ್ನು ಮುಂದಿನ ಸಂಚಿಕೆಗಳಲ್ಲಿ ಬೆಳಕಿಗೆ ತರುತ್ತೇವೆಂದು ಲೇಖಕರಿಗೆ ಆಶ್ವಾಸನೆ ನೀಡುತ್ತೇವೆ. ಸಂಬಂಧಿಸಿದ ಬರಹಗಾರರು ನಮ್ಮ ಇಕ್ಕಟ್ಟಿನ ಸ್ಥಿತಿಯನ್ನು ಅರ್ಥಮಾಡಿಕೊಳ್ಳುತ್ತಾರೆಂದು ನಮ್ಮ ಆಶಯ.

ಈ ಎಲ್ಲ ಕೆಲಸಗಳ ಗುರುತರ ಜವಾಬ್ದಾರಿಯನ್ನು ಸಂತೋಷದಿಂದ ಭರಿಸಿ, ದಕ್ಷತೆಯಿಂದ ನಿರ್ವಹಿಸಿದ ಗೆಳೆಯರಾದ ಬೇಲೂರು ರಾಮಮೂರ್ತಿಯವರಿಗೆ ಅಪರಂಜಿ ಆಭಾರಿ. ಶ್ರೀ ಎ.ಆರ್. ರಾಜಗೋಪಾಲ್ ಅವರು ಬಿಡುವಿಲ್ಲದೇ ಓಡಾಡಿ, ಸಂಚಿಕೆಗೆ ಜಾಹಿರಾತುಗಳನ್ನು ಒದಗಿಸಿದ್ದಾರೆ. ಈ ಮಿತ್ರರಿಗೆ

ಅಪರಂಜಿಯ ಕೃತಜ್ಞತೆಗಳು. ಚೊಕ್ಕವಾಗಿ ಡಿ.ಟಿ.ಪಿ. ಕೆಲಸವನ್ನು ನಿರ್ವಹಿಸಿದ ಒಮೇಗ ಲೇಸರ್‌ಟೆಕ್‌ನ ರವಿ, ವಸಂತಾ, ಮುದ್ರಣ ಕಾರ್ಯವನ್ನು ಶ್ರದ್ಧೆಯಿಂದ ಮಾಡಿಕೊಟ್ಟ ರವಿಗ್ರಾಫಿಕ್ಸ್‌ನ ವಿ.ಆರ್. ನಾಥ್ ಇವರೆಲ್ಲರಿಗೆ ನಮ್ಮ ನಮನ. ಎಲ್ಲಕ್ಕೂ ಮುಖ್ಯ ಪತ್ರಿಕೆಯನ್ನು ಕೊಂಡು ಓದುತ್ತಿರುವ ನಿಮಗೆ, ಓದುವ ಎಲ್ಲ ಕನ್ನಡಿಗರಿಗೆ, ನಿಮ್ಮ ಪ್ರೋತ್ಸಾಹಕ್ಕಾಗಿ ನಾವು ಋಣಿಗಳು.

ನಗೆಗನ್ನಡಂ ಗೆಲ್ಗೆ

- ಶಿವಕುಮಾರ್



ಮ್ಯಾಚ್ ಫಿಕ್ಸಿಂಗ್ಃ ಮೊದಲ ಪಾಠ
''ಬ್ಯಾಟನ್ನ ಹೀಗೆ ಹಿಡಿದು ಬಾಲ್‌ಗೆ ಟಚ್ ಮಾಡಿದ್ರೆ ಸಾಕು.
ಔಟಾಗೋದು ಖಂಡಿತ''

# ಈ ಸಂಚಿಕೆಯಲ್ಲಿ........




○ ಪ್ರಕಾಶ್

ಫ್ಲಾರಿಡಾ ರಾಜ್ಯ (ರಾಷ್ಟ್ರ?)ದ ಹೆಸರನ್ನು FLAW ರಿಡಾ ಎಂದು ಬದಲಾಯಿಸುತ್ತಾರಂತೆ!!

★★★

ಜನವರಿ ಹೊತ್ತಿಗಾದರೂ ಅಮೆರಿಕದ ಅಧ್ಯಕ್ಷರನ್ನು ಅಭಿನಂದಿಸುವಂತಾಗಲಿ!!

★★★

ಭಾರತ - ಅಮೆರಿಕಗಳ ನಡುವೆ INTERNETIONAL ಸಂಬಂಧ ಸುಗಮವಾಗಲಿ!!

★★★

ಅಂಚೆ ಮುಷ್ಕರ ತೀವ್ರ

- ಸುದ್ದಿ

**ಸದ್ಯ, ಸ್ವಲ್ಪ ಕಾಲವಾದರೂ ಬಿಲ್‌ಗಳ ಭಯ ಇರುಲ್ಲ!!**

★★★

ಇಂದಿನಿಂದ ವಿದ್ಯುತ್ ಇಲಾಖೆ ನೌಕರರಿಂದ ಮುಷ್ಕರ

- ಪತ್ರಿಕೆ

**ಶಾಕಿಂಗ್ ಸುದ್ದಿ ಅಂದ್ರೆ ಇದೇ!!**

★★★

ರಾಜ್ಯಪಾಲರಿಗಾಗಿ ಕಾದು ಕುಳಿತ ಇಸ್ರೋ ಅಧ್ಯಕ್ಷ

- ಧಾರವಾಡ ಸುದ್ದಿ

**ಅವರ ಕೋಪ ಆರ್ಬಿಟ್‌ನಲ್ಲಿ ಹೋಗಲಿಲ್ಲ ತಾನೆ?**

★★★

ಬಿ.ಎಸ್.ಎಫ್. ತಂಡಕ್ಕೆ ವಿರೋಚಿತ ಗೆಲುವು

- ಹಾಕಿ ಸುದ್ದಿ

**ವೀರಪ್ಪೋಚಿತ ಗೆಲುವೂ ಅವರಿಗೆ ದಕ್ಕಲಿ!!**

★★★

ಅಂಚೆ ಮುಷ್ಕರ ವಿವಾದ; ಚರ್ಚೆಗೆ ಆಹ್ವಾನ

- ಪತ್ರಿಕೆ

**ಆಹ್ವಾನ ಪತ್ರಿಕೆ ಹೇಗೆ ಕಳಿಸುತ್ತಾರೋ??**

★★★

ಕೋಲಾರ ಚಿನ್ನದ ಗಣಿ; ನಿವೃತ್ತಿ ಯೋಜನೆ

- ಸುದ್ದಿ

**Golden handshake ಅಂದರೆ ಇದೇ!!**

★★★

ವೀರಪ್ಪನ್ ಶ್ರೀಲಂಕಾದಲ್ಲಿ!!

- ಪತ್ರಿಕೆ

**ಈಗ ಧೈರ್ಯವಾಗಿ ಮಡುಕಬಹುದು!!**

★★★

# ಒಂದು ನಾಟಕೋತ್ತರ ಪ್ರಾರ್ಥನೆ

– ಭು. ಹೆ.

ವಿಘ್ನ ನಿವಾರಕ ಶರಣ್ರೀ ವಿನಾಯಕ
ಇತ್ತ ಕಡೆ ಹರಿಸ್ರಿ ತಮ್ಮ ನೋಟಗಳಾ
(ಕಟ್ಟಿ ಕೋಡುತೇವ್ರಿ ನಾವು ನೋಟುಗಳಾ)
ಕಾಪಾಡಿಕೊಳ್ರಿ ನಿಮ್ಮ ದಂತಗಳಾ
ಕೋಟಿ ಬೆಲೆ ಬಾಳೋ ನಿಮ್ಮ ದಂತಗಳ್ಳಾSS ||ಆಆSS||

ನಡಸೇವ್ರಿ ಡ್ರಾಮಾ ಡ್ರಾಮಾದೊಳಗ ಡ್ರಾಮಾ
ಕನ್ನಡದ ಜನಕೆಲ್ಲ ಮಂಗನಾಮಾ
ಆಗಿದ್ದು ಏನೋ ಆಯ್ತು ಎಂದಿದ್ದೇನೋ
ಕನ್ನಡದ ಕುರಿಗಳಿಗುಂಟೆ ಮಾನಾSS ||ಆಆSS||

ಅಣ್ಣಾವ್ರ ಹರಣ ವೀರಪ್ಪಗೆ ಶರಣ
ಭಾನು ಪ್ರಕರಣ ನಾಗಪ್ಪನಾ ಗತಿ ದಾರುಣ
ಓವರ್ ನೈಟು ಗ್ರಾನೈಟು ಕೋಟಿಪತಿಗಳಿಗೇಟು
ಯಾರ್‍ಯಾರಿಗೆ ಉಂಟು ಯಾರ ನಂಟೂSS ||ಊಊSS||

ಬಿಡುಗಡೆ ಆಯ್ತು ಅಂಕಪರದೆ ಬಿತ್ತು
ಯಾರಿಂದ ಅಂಬೋದು ಬಲುಗುಟ್ಟು
ಹೊಚ್ಚಿ ಪಂಚೆ ಶಾಲು ಅಡಗುತಾಣ ಬದಲು
ಮಾಡಬಲ್ಲೆಯಾ ದೇವ ಎಲ್ಲ ಬಯಲೂSS ||ಊಊSS||

ಗಡ್ಡ ಗಿಡ್ಡ ಬಿಡ್ತೇವ್ರೀ ಉರುಳು ಸೇವೆ ಮಾಡ್ತಿವ್ರಿ
ನಮ್ಮ ಮ್ಯಾಲೆ ಇರಲ್ರೀ ನಿಮ್ಮ ಕರುಣಾ
ಕಾಪಾಡ್ರಿ ದಯಮಾಡಿ ಕುರಿಗಳನಾ
ಹೇ ಗೋಪಾಲ, ಕೃಷ್ಣ ಕರುಣಾSS ||ಆಆSS||

# ಮನೆ ಕೆಲಸದಾಕೆಯೂ:
# ಅವಳ ಕಾವ್ಯ ಸಂದರ್ಭವೂ!

– ನಾ. ಡಿಸೋಜ

ಸರಕಾರಿ ನೌಕರ ಒಂದು ಊರಿಗೆ ಹೊಸದಾಗಿ ವರ್ಗವಾಗಿ ಬಂದನೆಂದರೆ ಆತ ಅನಿವಾರ್ಯವಾಗಿ ಕೊಲಂಬಸನೋ, ಆರ್ಕಿಮಿಡಿಸನೋ, ನ್ಯೂಟನ್ನೋ ಆಗಬೇಕಾಗುತ್ತದೆ. ಹೊಸ ಕಛೇರಿಯ ಕೆಲಸ ಕಾರ್ಯಗಳ ಬಗ್ಗೆ ತಲೆ ಕೆಡಿಸಿಕೊಳ್ಳದೆ ಆತ ಹುಡುಕಾಟದಲ್ಲಿಯೇ ತನ್ನನ್ನು ತೊಡಗಿಸಿಕೊಳ್ಳಬೇಕಾಗುತ್ತದೆ. ಊರಿಗೆ ಬಂದ ತಕ್ಷಣ ಮನೆ ಹುಡುಕು, ಗಟ್ಟಿಹಾಲು ಕೊಡುವವನನ್ನು ಹುಡುಕು (ಗಟ್ಟಿ ಹಾಲು ಅಂದ ಕೂಡಲೇ ನೆನಪಾಯಿತು, ನನ್ನ ಮಗ ಮೊನ್ನೆ ಗಟ್ಟಿಹಾಲು ಹೇಗಿರುತ್ತದೆ ಎಂದು ಕೇಳುತ್ತಿದ್ದ. ನನಗೂ ಈಗ ಇದು ಮರೆತು ಹೋಗಿದೆ. ಏಕೆಂದರೆ ಗಟ್ಟಿಹಾಲು ನೋಡಿ ಈಗ ಸುಮಾರು 40 ವರ್ಷಗಳು ಉರುಳಿ ಹೋಗಿವೆ. ಈಗ ಹಾಲು ಕೊಡುವವ ಪಾತ್ರೆಗೆ ಸುರಿಯುವ ನೀರೇ ಗಟ್ಟಿ ಹಾಲು! ಈ ವಿಷಯ ಇರಲಿ) ಹಾಗೆಯೇ ಒಳ್ಳೆಯ ಸಾಮಾನು ಕೊಡುವ ಅಂಗಡಿಯನ್ನು ಹುಡುಕು. ಸೌದೆ ಡಿಪೋ ಎಲ್ಲಿದೆ ಹುಡುಕು ಮಕ್ಕಳಿಗೆ ಇಂಗ್ಲಿಷ್ ಕಾನ್ವೆಂಟಿನಲ್ಲಿ ಸೀಟು ಹುಡುಕು, (ಇಂಗ್ಲೀಷ್ ಕಾನ್ವೆಂಟೇ ಏಕೆಂದರೆ ನಾವೆಲ್ಲ ಕನ್ನಡ ಭುವನೇಶ್ವರಿ ಅಭಿಮಾನೀ ಮಕ್ಕಳಲ್ಲವೇ? ಇರಲಿ) ಹೆಣ್ಣು ಮಕ್ಕಳಿಗಾಗಿ ಬ್ಯೂಟಿ ಪಾರ್ಲರ್ ಹುಡುಕು. ಹುಡುಗರಿಗಾಗಿ ಶೇವಿಂಗ್ ಸಲೂನ್ ಹುಡುಕು... ಹೀಗೆ ಈ ಹುಡುಕು ಪಟ್ಟಿ ಮುಂದುವರಿಯುತ್ತದೆ. ಈ ಪಟ್ಟಿಯಲ್ಲಿ ಮುಖ್ಯವಾದ ಇನ್ನೂ ಒಂದು ಐಟೆಮ್ ಎಂದರೆ ಮನೆ ಕೆಲಸದವಳನ್ನು ಹುಡುಕು.

ಯಾವುದನ್ನು ಬೇಕಾದರೂ ಹುಡುಕಬಹುದು. ಹುಡುಕಿ ದಕ್ಕಿಸಿಕೊಳ್ಳಬಹುದು. ಯುರೇಕಾ ಯುರೇಕಾ ಎಂದು ಕೂಗುತ್ತ ನೀರಿಲ್ಲದ ಟಬ್ಬಿನೊಳಗಿಂದ ಹಾರಿಬಿಡಬಹುದು. ಆದರೆ ಈ ಕೆಲಸದವರನ್ನು ಹುಡುಕುವುದಿದೆಯಲ್ಲ ಅದು ಪರಮಕಷ್ಟ.

ಕೆಲವರು ಸಿಗುತ್ತಾರೆ. ಆದರೆ ಅವರೀಗ ಎಂಟು ಮನೆಗಳಲ್ಲಿ ಕೆಲಸ ಮಾಡುತ್ತಿದ್ದಾರೆ. ಒಂಬತ್ತನೇ ಮನೆಗೆ ಅವರು ಬರುವುದಿಲ್ಲ (ಏನೋ ನವಗ್ರಹ ಭೀತಿ!) ಕೆಲವರಿಗೆ ಬೆಳಿಗ್ಗೆ ಆಗುವುದಿಲ್ಲ. ಕೆಲವರಿಗೆ ನೀವೇ ನೀರು ಸೇದಿ ಕೊಡಬೇಕು. (ಸದ್ಯ ನೀವೇ ಪಾತ್ರ ತೊಳೆಯಿರಿ, ನೀವೇ, ಬಟ್ಟೆ ಒಗೆಯಿರಿ ಸಂಬಳ

ಮಾತ್ರ ನನಗೆ ಕೊಡಿ ಎಂದು ಅವರು ಕೇಳುವುದಿಲ್ಲ!) ಕೆಲವರು ಬರೀ ತರಕಾರಿ ತಿನ್ನುವವರ ಮನೆಗೆ ಕೆಲಸ ಮಾಡುವುದಿಲ್ಲ. (ಏಕೆ? ಎಂದು ಕೇಳಿದೆ. ಛೆ! ಅಲ್ಲೇನೂ ಮಜ ಇರೋದಿಲ್ಲ ಎಂದರು) ಒಬ್ಬಳು ನೀವು ಬೆಳಿಗ್ಗೆ ತಿಂಡಿಗೆ ಅವಲಕ್ಕಿ ಮಾಡುತ್ತೀರಾ?' ಎಂದು ಕೇಳಿದಳು. ಅವಳಿಗೆ ಅವಲಕ್ಕಿ ಪ್ರಿಯವೇನೋ ಎಂದು ಹೌದು ಎಂದೆ ಅಯ್ಯಪ್ಪ ನಿಮ್ಮ ಮನೆ ಕೆಲಸ ಬೇಡ ಎಂದು ಓಡಿಹೋದಳು. ಅವಳಿಗೆ ನಿತ್ಯ ಉಪ್ಪಿಟ್ಟು, ದೋಸೆ ಬೇಕಂತೆ ಇನ್ನೊಬ್ಬಳು ನಿಮ್ಮಲ್ಲಿಗೆ ಆಗಾಗ್ಗೆ ನೆಂಟರು ಬರುತ್ತಾರೆಯೆ ಎಂದು ಕೇಳಿದಳು. ಹೌದು ಎಂದೆ. ಅವರಿಂದ ಮಾಡಿಸಿಕೊಳ್ಳಿ ನಾನು ಯಾಕೆ ಎಂದಳು. ಕೊನೆಯವಳೊಬ್ಬಳು ನಿಮ್ಮ ಮನೇಲಿರೋದು ಕಲರ್ ಟೀವಿಯ? ಎಂದು ಟೀವಿಯಿಂದ ಕೇಳಿದಳು. 'ಇಲ್ಲಮ್ಮ ಕಪ್ಪು ಬಿಳಿ' ಎಂದೆ. ಆ ಪುಣ್ಯಕ್ಕೆ ಮನೆ ಕೆಲ್ಸದೋರು ಯಾಕೆ ನಿಮಗೆ ಎಂದು ಮೂತಿ ತಿವಿದಳು. ಹೀಗೆಲ್ಲ ಮನೆ ಕೆಲಸದವರನ್ನು ಹುಡುಕುವಲ್ಲಿ ಇರುವ ಬವಣೆಗಳನ್ನು ಪಟ್ಟಿ ಮಾಡಬಹುದು.

ಇವೆಲ್ಲ ನನ್ನವೇ ಅನುಭವಗಳಾಗಿರುವುದರಿಂದ ನೇರವಾಗಿ ವಿಷಯಕ್ಕೆ ಬರುತ್ತೇನೆ. ಮೊಳಕಾಲಮೂರಿನಲ್ಲಿ ಮೊಣಕಾಲು ಮುರಿದುಕೊಂಡು ಎಂಟು ವರ್ಷ ಕೆಲಸ ಮಾಡಿದ ನನಗೆ ಈ ಬಾರಿ ಖಂಡಿತ ಬೇರೆ ಕಡೆಗೆ ವರ್ಗ ಮಾಡುತ್ತಾರೆಂಬುದು ಖಚಿತವಾಯಿತು. ಬೇಕಾದ ಮೂರು ಜಾಗಗಳನ್ನು ನೀವೇ ಕೇಳಿಕೊಳ್ಳಿ ಎಂದು ಸರಕಾರ ನೌಕರರ ಮುಂದೆ ಒಂದು ಛಾಯ್ಸು ಎಂಬ ಎಲುಬನ್ನು ಎಸೆಯಿತು. ನಾಯಿ ಒಂದೇ ಎಲುಬನ್ನು ಮತ್ತೆ ಮತ್ತೆ ಮೂಸಿ ನೆಕ್ಕುವಂತೆ ನಾನು ಮೂರು ಹೆಸರುಗಳನ್ನು ಬರೆದೆ ಚಿತ್ರದುರ್ಗ, ಚಿತ್ರಕಲ್‌ದುರ್ಗ, ಚಿಟಲ್ ದ್ರುಗ. ವಿಚಿತ್ರವೆಂದರೆ ನನಗೆ ವರ್ಗ ಮಾಡಿದ್ದು ಮಾತ್ರ ಹೊಸದುರ್ಗಕ್ಕೆ (ಕೇಂದ್ರ ಕಛೇರಿಗೆ ಎಂಟು ಸಾರಿ ಹೋಗಿ, ನಾಲ್ವರು ಎಂ.ಎಲ್.ಎ.ಗಳು ಮೂವರು ಮಂತ್ರಿಗಳು, ಇಬ್ಬರು ಎಂ.ಪಿ.ಗಳ ಪತ್ರ ಕೊಟ್ಟು ಎಂಟು ಸಾವಿರ, ನಾಲ್ಕು ಬಾಳೆಗೊನೆ ಆರು ಕೋಳಿ, ಹತ್ತು ಕೆ.ಜಿ. ಸೇಬು, ಎಂಟು ಕಲ್ಲಂಗಡಿ ಹಣ್ಣು ಎಲ್ಲ ಕೊಟ್ಟ ನಂತರ ಈ ವರ್ಗಾವಣೆ ಆಜ್ಞೆ ಬಂತು. ಆ ವಿಷಯ ಇರಲಿ!)

ಹೊಸದುರ್ಗಕ್ಕೆ ಬಂದ ಮೇಲೆ ಹೇಳಿದೆನಲ್ಲ ನನ್ನ ಹುಡುಕಾಟದ ಬವಣೆ ಆರಂಭವಾಯಿತು. ಅದರ ವಿವರ ಬೇಡ. ಮನೆ ಸಿಕ್ಕಿತು, ಬಾವಿ, ಬಾವಿಯಲ್ಲಿ ನೀರು ಇರುವ ಮನೆ, ಹಾಲಿನವ ಗಟ್ಟಿ ಹಾಲು ಕೊಡಲು ಒಪ್ಪಿದ. ಉಳಿದವುಗಳ ವ್ಯವಸ್ಥೆಯೂ ಆಯಿತು. ''ಎಲ್ಲ ಸರಿ ಮೆನಗೆಲಸದೋಳು ಸಿಗಲಿಲ್ವೆ'' ಎಂದು ಇವಳು ಗೊಣಗತೊಡಗಿದಳು. ಇವಳ ಗೊಣಗಾಟವೆಂದರೆ ಅತ್ತೆಯ ಮೇಲಿನ ಕೋಪ ಕೊತ್ತಿಯ ಮೇಲೆ ಅನ್ನುವ ಹಾಗೆ. ಅವಳ ಕಷ್ಟಗಳಿಗೆಲ್ಲ ನಾನೇ ಕಾರಣ

ಎಂಬಂತಹಾ ಮನೋಭಾವ ನನ್ನವಳದ್ದು. ಹಾಲಿನವ ಬರಲಿಲ್ಲ. ನೆಲ ಕೊಳೆಯಾಗಿದೆ. ಪಾತ್ರೆ ಬೆಳಗಿಲ್ಲ, ಸೌದೆ ಉರಿಯುತ್ತಿಲ್ಲ, ಬಾವಿಯ ನೀರು ತೀರಾ ಕೆಳಗೆ ಹೋಗಿದೆ. ಅವಳ ಕಾಲು ನೋಯುತ್ತಿದೆ,. ಕಣ್ಣು ಸಿಡಿಯುತ್ತಿದೆ, ಸೊಂಟ ಹಿಡಿದುಕೊಂಡಿದೆ, ಈ ಎಲ್ಲ ಅನಾಹುತಗಳಿಗೂ ನಾನೇ ಕಾರಣ ಎಂಬುದವಳ ತರ್ಕ. ಹೀಗೆಂದೇ ಎಲ್ಲದಕ್ಕೂ ಅವಳು ನನ್ನನ್ನೇ ದೂರುವುದು. ಟೀಕಿಸುವುದು ರೂಢಿ. ಈಗಲೂ ಹಾಗೇ ಆಯಿತು.

''ನಿಮಗೇನು... ಒಬ್ಬಳು ಕೆಲಸದವಳು ಸಿಗಲಿಲ್ಲ... ಎಲ್ಲ ನಾನೇ ಮಾಡಬೇಕು.... ನಾನೇನು ಮನೆ ಗುಡಿಸಲೆ ನೆಲ ಒರೆಸಲೆ? ನೀರು ತುಂಬಲೆ?

ಎಂದು ರಾಗ ತೆಗೆದಾಗ ನಾನು ಎಂದಿನಂತೆ ''ನಾನು ಏನು ಮಾಡಲಿಕ್ಕೂ ರೆಡಿ ಕಣೆ.. ಏನು ಮಾಡಬೇಕು ಹೇಳು...'' ಎಂದೆ, ಪ್ಯಾಂಟಿನ ಬೆಲ್ಟನ್ನು ಬಿಗಿದುಕೊಂಡು.

''ಮೊದಲು ಒಬ್ಬಳು ಕೆಲಸದವಳನ್ನು ಹುಡುಕಿ ಆಮೇಲೆ ಎಲ್ಲ ಮಾಡುವಿರಂತೆ...'' ಎಂದಳು ಹೈ ಕಮಾಂಡಿನ ವರಸೆಯಲ್ಲಿ.

ಅದೂ ಸರಿಯೆ ಅಂದುಕೊಂಡೆ. ಆಫೀಸಿನಲ್ಲಿ ಮ್ಯಾನೇಜರ್‌ಗೆ, ಸ್ಟೆನೋಗೆ, ಜವಾನನಿಗೆ, ಸ್ಟೋರ್ ಕೀಪರ್‌ಗೆ ಕೊನೆಗೆ ಗುತ್ತಿಗೆದಾರ ಮೈಲಣ್ಣ ಕೊಂಡಾರೆಡ್ಡಿ ಎಲ್ಲರಿಗೂ ಹೇಳಿದೆ. - ಮನೇಲಿ ಕೆಲಸದೋಳಿಲ್ಲದೆ ತೊಂದರೆಯಾಗಿದೆ ಏನಾದರೂ ಮಾಡಿ.

ಮ್ಯಾನೇಜರ್ ಸಾಹೇಬರಿಂದ ಬೈಸಿಕೊಂಡು ಬಂದವ ''ನಾಳೆಯಿಂದ ನಾನೇ ಬರತೀನಿ ಬಿಡ್ರಿ... ಊಟ ಹಾಕಿ ಮುನ್ನೂರು ಕೊಡಿ ಈ ಕೆಲಸ ಸಾಕಾಗಿ ಹೋಗಿದೆ...'' ಎಂದ.

ಕ್ರಮೇಣ ಈ ಹಿಂದೆ ನಾನು ಹೇಳಿದ ಅನುಭವಗಳೂ ಆದವು. ಹದಿನೈದು ದಿನಗಳಾದರೂ ಕೆಲಸದಾಕೆ ಸಿಗಲಿಲ್ಲ. ಮನೆಯಲ್ಲಿ ಅವಳು ಗುಡಿಸುತ್ತ, ಒರೆಸುತ್ತ ನನ್ನನ್ನು ಮೆತ್ತಗೆ ಮಾಡಿದಳು. ಇನ್ನೇನು ಗ್ರಾಮ ದೇವತೆ ಹೊಸ ದುರ್ಗಮ್ಮನಿಗೆ ಹರಕೆ ಹೇಳಿಕೊಳ್ಳಬೇಕು ಅನ್ನುವಾಗ ಸ್ಟೋರ್ ಕೀಪರ್ ತಿರುಮಲರಾಯ ಹೇಳಿ ಕಳುಹಿಸಿದ. ಹೋಗಿ ಅವನ ಛೇಂಬರಿನಲ್ಲಿ ಕೂತೆ. ಅತ್ತ ಸಿಮೆಂಟು ಇತ್ತ ಸ್ಟೀಲು ಹಿಂದೆ ಲಾರಿಯ ಹಳೆಯ ಟೈರುಗಳು, ಮೇಲೆ ಬಾಂಡಲಿ, ಪಿಕಾಸಿಗಳು, ಇವುಗಳ ನಡುವೆ ನಾಮಧಾರಿ ತಿರುಮಲ ಕೂತಿದ್ದರೆ ಭಯಭಕ್ತಿಯಿಂದ ಯಾರೂ ಕೈ ಮುಗಿಯಬೇಕು ನಾನೂ ಕೈಮುಗಿದೆ.

''.... ನಿಮಗೆ ಜನ ಬೇಕು ಅಲ್ವ?'' ಎಂದು ಕೇಳಿದ ಮೊದಲು ನನಗೆ ಗೊತ್ತಾಗಲಿಲ್ಲ. ಮನೆ ಕೆಲಸಕ್ಕೆ ಜನ... ''ಓ! ಬೇಕು,... ಬೇಕು...''

''ನಾಳೆ ಒಂದು ಹೆಂಗಸು ಬರುತ್ತೆ. ಒಂದು ಗಂಟೆ ಕೆಲಸ. ಬಂದ ತಕ್ಷಣ ಬ್ರೂ ಕಾಫಿ... ಪಾತ್ರೆ ತೊಳೆಯೋದು. ಬಟ್ಟೆ ಒಗೆಯೋದು, ನೆಲ ಒರೆಸೋದು... ಹೋಗುವಾಗ ಒಂದು ತಿಂಡಿ. ಕಾಫಿ.... ಮುನ್ನೂರು ತಿಂಗಳಿಗೆ... ಆದೀತಾ...''

''ನನ್ನ ತಕರಾರಿಲ್ಲ ಆದರೆ ಆಕೆ ಹೇಗೆ''...

ಆದರೆ ಆಕೆ ತುಂಬಾ ಒಳ್ಳೇ ಹೆಂಗಸು... ಕ್ರಿಟಿಕ್ ಲೋಕನಾಥನ್ ಮನೇಲಿ ಕೆಲಸ ಮಾಡುತ್ತಿದ್ದಳು... ಅವರಿಗೆ ದಾವಣಗೆರೆಗೆ ವರ್ಗವಾಯಿತಲ್ಲ... ಹೀಗಾಗಿ ನಿಮಗೆ ಜನ ಸಿಕ್ಕಿತು...''

'ಅದು ಸರಿ... ಈ ಕ್ರಿಟಿಕ್ ಅಂದಿರಲ್ಲ... ಏನದು?''

ಕ್ರಿಟಿಕ್... ಕ್ರಿಟಿಕ್ ಪತ್ರಿಕೆಲಿ ಬರೆಯೋದಪ್ಪ... ಹಾಂ ವಿಮರ್ಶಕ... ವಿಮರ್ಶಕ... ಆ ಜನ ಕಡಿಮೆ ಅಲ್ಲ ಅವರ ಮನೇಲಿ ಐದು ವರುಷ ಕೆಲಸ ಮಾಡಿದ ಜನ ನಾಳೆ ನಿಮ್ಮ ಮನೆಗೆ ಬರೋದು ನೀವು ಹುಂ ಅನ್ನಿ....'

ನಾನು ಹುಂ ಅಂದೆ. ನನಗೂ ಅಲ್ಪಸ್ವಲ್ಪ ಪತ್ರಿಕೆ ಪುಸ್ತಕಗಳ ಹುಚ್ಚಿತ್ತು. ವಿಮರ್ಶಕ ಲೋಕನಾಥನ ಹೆಸರನ್ನು ನಾನೂ ಕೇಳಿದ್ದೆ, ಅವರ ಮನೆಯಲ್ಲಿ ಕೆಲಸ ಮಾಡುತ್ತಿದ್ದಾಕೆ ಅಂದ ಮೇಲೆ ಒಳ್ಳೆಯವಳೇ ಆಗಿರುತ್ತಾಳೆ ಅನುಮಾನವಿಲ್ಲ ಅಂದುಕೊಂಡು ತಿರುಮಲನಿಗೆ ಥ್ಯಾಂಕ್ಸ್ ಹೇಳಿ ಬಂದೆ. ವಿಷಯ ತಿಳಿದು ನನ್ನವಳೂ ಕುಣಿದಾಡಿದಳು.

''ಒಳ್ಳೆಯದಾಯ್ತು ಬಿಡಿ... ಈ ಬೀದೀಲಿ ಎಲ್ರ ಮನೆಗೂ ಕೆಲಸದೋರು ಬರುವಾಗ ನಮ್ಮಲ್ಲಿಗೆ ಬರಲ್ಲ ಅಂದೆ ಹ್ಯಾಗೆ... ಎಂದು ನನ್ನನ್ನು ಅಂದು ಪ್ರೀತಿಯಿಂದ ಕಂಡಳು.

ಮಾರನೇ ದಿನ ಒಂಬತ್ತು ಗಂಟೆಗೆ ಗಡಿಯಾರದ ಬದಲು ಬಾಗಿಲ ಗಂಟೆ ಸದ್ದು ಮಾಡಿತು. ನಾನೇ ಬಾಗಿಲು ತೆಗೆದೆ. ಲಕ್ಷಣವಾಗಿ ಸೀರೆಯುಟ್ಟ, ತಲೆಬಾಚಿ ಹೂ ಮುಡಿದ, ಹೆಗಲಿಗೆ ಚರ್ಮದ ಚೀಲ ಕಾಲಿಗೆ ಚಪ್ಪಲಿಧರಿಸಿದ ಹೆಂಗಸು.

''ನಾನು ಲೀಲಾ ಬಸವನಳ್ಳಿ...''

''ಗೊತ್ತಾಯ್ತು ಬಾಮ್ಮ... ಲೇ ಬ್ರೂ ಕಾಫಿ'' ಎಂದೆ. ಲೀಲಾ ಕೆಲಸ ಆರಂಭಿಸಿದಳು. ಕಾಫಿಯೂ ಆಯಿತು. ಹತ್ತು ಗಂಟೆಗೆ ಅವಳಿಗೆ ಹೋಗುವಾಗ ತಿಂಡಿ ಕಾಫಿಯೂ ಆಯಿತು. ಆಕೆ ಅತ್ತ ಹೋದ ಮೇಲೆ ನನ್ನವಳು ಕೊಠಡಿಗೆ ಬಂದಳು.

''ರೀ...'

ಎಂದು ಪೆಚ್ಚಾಗಿ ರಾಗ ಎಳೆದಳು. ಲಾಗಾಯ್ತಿನಿಂದ ಕನ್ನಡ ಮೀಡಿಯಂನಲ್ಲಿ ಓದುತ್ತಿದ್ದ ಹುಡುಗಿ ಮೊದಲ ದಿನ ಇಂಗ್ಲೀಷ್ ಮೀಡಿಯಂ ತರಗತಿಗೆ ಹೋಗಿ ಬಂದಂತೆ.

''ಏನು?''

''ಅವಳೊಂದು ಪಟ್ಟಿ ಕೊಟ್ಟು ಹೋಗಿದಾಳ್ರಿ''

''ಅವಳು ಅಂದ್ರೆ ಯಾರೆ?''

''ಅದೇ ಲೀಲಾ ಬಸವನಳ್ಳಿ''

''ಏನಂತೆ...?''

''ಓದ್ಲಾ....?''

''ಓದು.....''

ಕೇಳಿ... ಇಂದು... ನಾನು ಹಳೇ ಮೌಲ್ಯಗಳಿಗೆ ಬೆಲೆ ಕೊಡುವ ಕೆಲಸದ ಆಳಲ್ಲ... ಕಾಮೂ ಹೇಳಿದ ಹಾಗೆ...''

ಕಾಮೂ...! ಅವನ್ಯಾರೆ?

''ಹುಂ ಅದೇನೋ ಬರೆದಿದ್ದಾಳೆ... ಗೊತ್ತಾಗೋಲ್ಲ.

''ಮುಂದೆ ಓದು''

ಎರಡನೆಯದು ಮನೆಗೆಲಸದಲ್ಲಿ ಅಮೂಲಾಗ್ರ ಬದಲಾವಣೆಗಳಾಗಬೇಕಾಗಿರುವುದರಿಂದ ಇಲ್ಲಿ ನಮೂದಿಸಿರುವ ಪರಿಕರಗಳ ಅವಶ್ಯಕತೆ ಇದೆ.

''ಪರಂಪರೆಯನ್ನು ಪ್ರತಿನಿಧಿಸುವ ಈಚಲ ಪೊರಕೆಯ ಬದಲು ಜನತಾ ಬಜಾರಿನ ಸ್ಟೀಫ್‌ವೆಲ್ ಬ್ರೂಮಸ್ಟಿಕ್ ತರಿಸುವುದು.

''ನೆಲ ಒರೆಸಲು ಹಳೆಯ ಪ್ಯಾಂಟಿನ ಕಾಲಿನ ಬದಲು ಸ್ಪಂಜನ್ನು ನೀಡುವುದು.

''ಚಪ್ಪಲಿಗಳನ್ನು ಮೂಲೆಯಲ್ಲಿ ರಾಶಿ ಹಾಕುವುದರ ಬದಲು ವ್ಯವಸ್ಥಿತವಾಗಿ ಚಪ್ಪಲಿಗಳನ್ನು ಇಡುವ ಒಂದು ರ್‍ಯಾಕನ್ನು ತರುವುದು.

''ಪಾತ್ರೆಗಳ ತಳ ಮಸಿಯಾಗುವುದನ್ನು ತಪ್ಪಿಸಲು ಅಡಿಗೆ ಮಾಡಲು ಗ್ಯಾಸನ್ನು ಬಳಸುವುದು.''

ನನ್ನವಳು ಲೀಲಾ ಬಸವನಳ್ಳಿ ನೀಡಿದ ಪಟ್ಟಿಯನ್ನು ಓದುತ್ತ ಹೋದಳು. ಪಟ್ಟಿಯಲ್ಲಿರುವುದನ್ನೆಲ್ಲ ತರಲು ಅದನ್ನು ಕಾರ್ಯರೂಪಕ್ಕೆ ಇಳಿಸಲು ಕೊಂಚ ಕಷ್ಟವಾಗಬಹುದು. ಅನಿಸಿತು. ಆದರೆ ಹೀಗೆಂದು ಹೇಳಲುಂಟೆ?

ನೋಡಿ ಮಂತ್ರಿಗಳು ಹೇಳೋ ಹಾಗೆ ಎಲ್ಲ ನಮ್ಮ ಗಮನದಲ್ಲಿದೆ ಮಾಡೋಣ?... ಅಂತ ಹೇಳು. ಎಂದು ಇವಳಿಗೆ ಹೇಳಿದೆ. ಇವಳು ಕೂಡ ಅದೇ ಸರಿ ಎಂದು ತಲೆ ತೂಗಿದ್ದಳು. ತುಂಬಾ ಕಷ್ಟ ಪಟ್ಟು ನಾವು ದೊರಕಿಸಿಕೊಂಡ ಕೆಲಸದಾಕೆ ಹೊರಟು ಹೋಗುವುದು ನಮಗೆ ಬೇಕಿರಲಿಲ್ಲ. ಹಿಂದೆಲ್ಲ ಕೆಲಸದವರಿಂದ ಏನೇನೋ ತೊಂದರೆ ಅನುಭವಿಸಿದ ನಾವು ಲೀಲಾ ಬಸವನಳ್ಳಿಯವಳಿಂದ ಬರಬಹುದಾದ ತಾಪತ್ರಯಗಳನ್ನು ಎದುರಿಸಲು ಸಿದ್ಧರಾದೆವು.

ಮಾರನೆ ದಿನ ಕೆಲಸಕ್ಕೆಂದು ಬಂದ ಲೀಲಾ ಇವಳೊಂದಿಗೆ ಮಾತಿಗೆ ಒಪ್ಪಿಕೊಂಡಂತಿತ್ತು. ಅವಳು ಮತ್ತೆ ಯಾವುದೇ ತಕರಾರು ಮಾಡಲಿಲ್ಲ. ಆದರೆ ಕಾಫಿ ತಿಂಡಿ ಮುಗಿಸಿ ಲಿಲಾ ಅತ್ತ ಹೋಗುತ್ತಿರಲು ಇವಳು ಮತ್ತೆ ನನ್ನ ಕೊಠಡಿಗೆ ಓಡಿ ಬಂದಳು 'ರೀ' ಎಂದು ಕೂಗುತ್ತ.

''ಏನು ಜಿಲ್ಲಾ ಮಂತ್ರಿಗಳಿಗೆ ಜಿಲ್ಲೆಯ ಜನ ಮತ್ತೆ ಮತ್ತೆ ಒಂದೇ ಮನವಿ ಪತ್ರ ಕೊಡುವ ಹಾಗೆ ಲೀಲಾ ಬಸವನಹಳ್ಳಿ ಮತ್ತೆ ಅದೇ ಪಟ್ಟಿ ಕೊಟ್ಟಿದಾಳೇನು?'' ಎಂದು ಕೇಳಿದೆ ನಾನು ಅವಳ ಮುಖ ನೋಡಿ.

ಪಟ್ಟಿ ಅಲ್ಲ... ಈ ಶಬ್ದಗಳ ಅರ್ಥ ನನಗೆ ಗೊತ್ತಾಗ್ತಾ ಇಲ್ಲ. ಎಂದಳು ಅವಳು.

''ಅದೇನೆ ಮತ್ತೊಂದು ಸಮಸ್ಯೆ'' ಎಂದು ಹಣೆಯ ಮೇಲೆ ಹತ್ತು ನೆರಿಗೆಗಳನ್ನು ಮೂಡಿಸಿಕೊಂಡು ನಾನು ಅವಳ ಮುಖ ನೋಡಿದೆ.

ಅವಳು ಒಂದೊಂದೇ ಪದವನ್ನು ನನ್ನ ಮುಂದೆ ಇಡಲಾರಂಭಿಸಿದಳು.

ಆ ಶಬ್ದಗಳು ಕೇಸರಿಬಾತಿನ ನಡುವೆ ಸಿಕ್ಕ ಕಲ್ಲುಗಳ ಹಾಗೆ ನನಗೆ ಕಂಡವು. ಸಹ ಸ್ಪಂದನ, ತೊಡಗಿಕೋ, ಒಡ್ಡಿಕೋ, ಪ್ರತಿಕ್ರೀಯಿಸು, ಅಯಾಮ, ತಟ್ಟು, ಮುಟ್ಟು, ಕ್ರಿಯೆ, ಅವಸ್ಥೆ, ತೀವ್ರತೆ, ಪ್ರಜ್ಞೆ, ತಳ, ಏಕಾಕಿತನ, ಅಕಡೆಮಿಕ್, ಹಂದರ, ಸಮೂಹ ಸನ್ನಿ, ಸಮಷ್ಠಿ, ತುರ್ತು, ಕಾಳಜಿ, ಗಟ್ಟಿತನ, ದೇಸಿ ಮನ್ವಂತರ ಕ್ಷಿತಿಜ. ಅನುಭವ ಹೆಪ್ಪುಗಟ್ಟುವುದು... ಸಾಕು ಮಹಾರಾಯ್ತಿ ಸಾಕು... ಎಂದು ನಾನು ಕೂಗಿಕೊಂಡೆ.

''ಅಲ್ಲ ಈ ಎಲ್ಲ ಶಬ್ದಗಳನ್ನು ಆ ಲೀಲ ಬಸವನಳ್ಳಿ ಬಳಸಿದ್ದ?

''ಹೌದೂರಿ... ಒಂದೊಂದು ವಾಕ್ಯದಲ್ಲಿ ಹೀಗೆ ಒಂದು ಎರಡು ಶಬ್ದಗಳನ್ನು ಅವಳು ಬಳಸ್ತಾಳೆ... ನನಗೆ ಅವಳ ಮಾತೇ ಅರ್ಥವಾಗೋದಿಲ್ಲ...''

''ಛೆ!'' ಎಂದು ನಾನು ಪೇಚಾಡಿಕೊಂಡೆ. ಶಬ್ದಗಳ ಮಾಲೆ ಕೇಳಿಯೇ ನನ್ನ ತಲೆ ಕೆಟ್ಟಿರುವಾಗ ಇನ್ನು ಈ ಶಬ್ದಗಳನ್ನು ಬಳಸಿದ ವಾಕ್ಯಗಳನ್ನು ಕೇಳಿ ಅವಳಿಗೆ ಏನು ಆಗಿರಲಿಕ್ಕಿಲ್ಲ!

ಬೆಳಿಗ್ಗೆ ಏನಾಯ್ತು ಗೊತ್ತ?

ನಾನು ಅವಳ ಮುಖ ನೋಡಿದೆ.

''ಕೆಲಸ ಮುಗಿಸಿಕೊಂಡು ಹೊರಟಾಗ ಅವಳಿಗೆ ಉಪ್ಪಿಟ್ಟು ಕೊಟ್ಟೆ... ಏನಂದ್ಲು ಗೊತ್ತ?''

''ಏನಂದ್ಲು?''

''ಉಪ್ಪಿಟ್ಟಿಗೆ ಮಣ್ಣಿನ ವಾಸನೇನೆ ಇಲ್ಲವಲ್ಲ ಅಮ್ಮ ಅಂದ್ಲು... ಉಪ್ಪಿಟ್ಟಿಗೆ ಮಣ್ಣಿನ ವಾಸನೆ ಯಾಕೆ ಇರಬೇಕು ಅಂತ ನಾನು ಕೇಳ್ದೆ... ಯಾವುದಕ್ಕೇ, ಆಗಲಿ ಒಂದು ಮಣ್ಣಿನ ವಾಸನೆ ಬೇಕು ಅಂದ್ಲು... ಏನು ಹೀಗಂದ್ರೆ?''

ನನ್ನನ್ನೇ ಕೇಳಿದಳು ನನ್ನಾಕೆ. ನನ್ನ ಅಲ್ಪಸ್ವಲ್ಪ ಸಾಹಿತ್ಯಜ್ಞಾನ ಕೆಲಸಕ್ಕೆ ಬರಲಿಲ್ಲ.

ಏನೇ ಆಗಲಿ... ನಾವಂತೂ ಅವಳನ್ನು ಸಹಿಸಿಕೊಂಡು ಹೋಗಬೇಕು... ಅವಳ ಹತ್ರ ಆದಷ್ಟು ಮಾತು ಕಡಿಮೆ ಮಾಡು ಅಂದೆ. ನಮಗೆ ಬೇರೆ ದಾರಿ ಯಾವುದೂ ಇರಲಿಲ್ಲವೆ?

★★★

ನಾಲ್ಕು ದಿನ ನಾನು ಆಫೀಸ್ ಕೆಲಸದ ಮೇಲೆ ಹೋದೆ. ತಿರುಗಿ ಬಂದಾಗ ಇವಳು ನೆಲ ಒರೆಸುತ್ತಿದ್ದಳು.

''...ಏನಾಯ್ತು... ಎಲ್ಲಿ ಲೀಲಾ ಬಸವನಳ್ಳಿ?'' ಎಂದು ಗಾಬರಿಯಿಂದ ಕೇಳಿದೆ.

''ಅಯ್ಯೋ ಅದೊಂದು ಕತೆ ಆಯ್ತು...'' ಎಂದಳು.

ನಾನು ಹೋದ ಮಾರನೇ ದಿನ ನೀರು ಸೇದುವಾಗ ಕೊಡಪಾನ ಬಾವಿಗೆ ಬಿತ್ತಂತೆ. ಕೊಡಪಾನ ತಗೆದುಕೊಡುವುದಾಗಿ ಹೇಳಿ ಓರ್ವ ಬಂದ. ಅವ ಹಗ್ಗ ಕಟ್ಟಿಕೊಂಡು ಬಾವಿಗೂ ಇಳಿದ ಮೂರುನಾಲ್ಕು ಬಾರಿ ಮುಳುಗು ಹಾಕಿ ಬಂದ ಕೊಡಪಾನ ಸಿಗಲಿಲ್ಲ ಮೇಲೆ ಬಂದು ''ಅಮ್ಮಾವ್ರೆ ಕೊಡಪಾನ ಕಾಣತಿಲ್ಲ'' ಎಂದನಂತೆ. ಲೀಲಾ ಬಸವನಳ್ಳಿ ಅಲ್ಲಿಯೇ ನಿಂತಿದ್ದಳು. ''ನಿಮಗೆ ಆಳಕ್ಕೆ ಇಳಿದೇ ಗೊತ್ತಿಲ್ಲ... ಎಲ್ಲ ಮೇಲು ಮೇಲಿನ ವ್ಯವಹಾರ. ಅಂದಳಂತೆ ಲೀಲಾ.

''ನಾನು ಆಳಕ್ಕೇ ಅಲ್ವ ಹೋಗಿ ಬಂದಿರೋದು... ಮತ್ತೆ ಯಾವ ಆಳಕ್ಕೆ ಹೋಗಲಿ... ನೀನು ಒಂದು ಸಾರಿ ಆಳಕ್ಕೆ ಇಳಿದು ನೋಡು ಗೊತ್ತಾಗುತ್ತೆ... ಇದು ಮಾತನಾಡಿದ ಹಾಗಲ್ಲ'' ಎಂದ ಬಾವಿಗೆ ಇಳಿದವ.

ಸರಿ ಅವನಿಗೂ ಇವಳಿಗೂ ಜಗಳವಾಯಿತು. ನಾನು ಹದಿನೈದು ವರ್ಷಗಳಿಂದ ಈ ಕೆಲಸ ಮಾಡುತ್ತಿದ್ದೇನೆ... ಸಾವಿರಾರು ಬಾವಿಗೆ ಇಳಿದಿದ್ದೇನೆ. ಅಂತ ಆತ... ನಾನೂ ನೂರುಮನೇಲಿ ಕೆಲಸ ಮಾಡಿದೀನಿ ಅಂತ ಇವಳು... ಭಾರೀ ಜಗಳ ಕೊನೆಗೆ ಲೀಲಾ ಈ ಮನೇಲಿ ಇರೋದು ನನ್ನ ಅಭಿಮಾನಕ್ಕೆ ಧಕ್ಕೆ ಎಂದು ಹೇಳಿ ಮನೆ ಕೆಲಸ ಬಿಟ್ಟು ಹೋದಳು.

''ಹೋಗಲಿ ಬಿಡಿ... ಸದ್ಯ ಅವಳ ಮಾತು ಕೇಳೋದು ತಪ್ಪಿತಲ್ಲ'' ಎಂದಳು ನನ್ನಾಕೆ.

ನೋಡೋಣ ಬೇರೆಯವರು ಸಿಗಬಹುದು ಎಂದೆ ನಾನು.

ನೋಡಿ ಆದರೆ ಈ ಕ್ರಿಟಿಕ್ಕು ಗ್ರಿಟಿಕ್ಕುಗಳ ಮನೇಲಿ ಕೆಲಸ ಮಾಡತಿರೋರನ್ನ ಮಾತ್ರ ಕರೆತರಬೇಡಿ. ಎಂದು ನನ್ನನ್ನೇ ಕುಕ್ಕಿದಳು.

## ಮೂಲ

ಆತನ ಪ್ರೇಯಸಿ ರೇಣು
ಕುರೂಪಿಯಾದರೇನು?
ಪ್ರೀತಿಯ ಮೂಲ
ರೂಪವಲ್ಲ
ಮಾವನು ಕೊಡುವ ಜಮೀನು

- ಹೆಚ್. ಡುಂಡಿರಾಜ್

# ಯಶೋಧಮ್ಮ ಬೆಪ್ಪಾದುದು ಏಕೆ?

– ಕೇಶವಮೂರ್ತಿ

ಯಶೋಧಮ್ಮನವರಿಗೆ ಈ ಪ್ರಪಂಚ ಕಾಮನ ಬಿಲ್ಲಿನಂತೆ ವರ್ಣಮಯವಾಗಿತ್ತು; ಜೀವನ ಸುಂದರವಾಗಿತ್ತು, ಆನಂದಮಯವಾಗಿತ್ತು.

ಹೀಗೆ ಇರಬೇಕಾದ್ದೆ. ಕೈತುಂಬ ಸಂಬಳ, ಮೈತುಂಬ ಗಿಂಬಳ ತರುತ್ತಿದ್ದ ಆಜ್ಞಾಧಾರಕ ಗಂಡ. ಅಪರಂಜಿಯಂತಹ ಒಬ್ಬನೇ ಮಗ. ಈ ಒಬ್ಬನೇ ಮಗ ಆಗುವುದಕ್ಕೂ ಜನರಿಂದ ಪುತಗುಟ್ಟುತ್ತಿರುವ ಭವ್ಯ ಭಾರತಕ್ಕೆ ಒಬ್ಬ ಪುತ್ರ ರತ್ನನ ಕೊಡುಗೆಯೇ ಸಾಕು ಎಂಬ ಸ್ವದೇಶ ಸದ್‌ಭಾವನೆಗಿಂತಲೂ ಮಿಗಿಲಾಗಿ ಸ್ವದೇಹ ಪ್ರೀತಿಯೇ ಕಾರಣ. ಆ ಒಬ್ಬ ಮಗನ ಹೆರಿಗೆಯಲ್ಲಿ ಪಡಬಾರದ ಪಾಡು ಪಟ್ಟಿದ್ದ ಯಶೋಧಮ್ಮನವರು ಆಗಲೆ ಮುಂದೆಂದೂ ಮಕ್ಕಳಾಗದಂತೆ ಶಸ್ತ್ರಕ್ರಿಯೆ ಮಾಡಿಸಿಕೊಂಡಿದ್ದರು. 'ಒಬ್ಬ ಮಗ ಮಗನಲ್ಲ, ಒಂದು ಕಣ್ಣು ಕಣ್ಣಲ್ಲ' ಅಂತ ಜನ ಅಂದಾಗ ತಾತ್ಸಾರದಿಂದ ಮೂಗು ಮೇಲೇರಿಸಿದ್ದರು. 'ನಮ್ ಯಶೋಧಂಗೆ ಆ ದೇವ್ರು ಇನ್ನೊಂದು ಕುಡಿನಾದರೂ ಕೊಡಬಾರದ' ಅಂತ ಹಳ್ಳಿಯಲ್ಲೇ ಹುಟ್ಟಿ ಬೆಳದ ಅಮ್ಮಾವ್ರ ಅಜ್ಜಿ ಕೊರಗಿದಾಗ ಮುಸಿ ಮುಸಿ ನಕ್ಕಿದ್ದರು.

ಒಬ್ಬನೇ ಮಗ ಅಂತ ಮುದ್ದಿನಿಂದ ಬೆಳೆಸಿದ್ದರು, ಇದ್ದ ಒಬ್ಬ ಮಗ ಈರಬದ್ರ ಆದ ಅನ್ನೋ ಹಂಗಾಗಲಿಲ್ಲ. ಬುದ್ಧಿವಂತ, ಎಲ್ಲಾ ತರಗತೀಲೂ ಮೊದಲನೆ ದರ್ಜೇಲಿ ಪಾಸುಮಾಡಿಕೊಂಡು ಬಂದಿದ್ದ. ಡೊನೇಶನ್ನು, ಶಿಫಾರಸ್ಸು ಇಲ್ಲದೆ ಮಗನಿಗೆ ಇಂಜಿನಿಯರಿಂಗ್‌ನಲ್ಲಿ, ಅದೂ ಮಾಹಿತಿ ತಂತ್ರಜ್ಞಾನದ ಕೋರ್ಸ್‌ನಲ್ಲಿ ಸೀಟು ಸಿಕ್ಕಿದಾಗ ಅಮ್ಮನವರಿಗೆ ಸ್ವರ್ಗ ಮೂರೇ ಗೇಣು ಅನ್ನಿಸಿತು.

ಮುಖ ನೋಡಿ ಮಣೆ ಹಾಕುವವರೇ ತುಂಬಿರೋ ಈ ಜಗತ್ತಿನಲ್ಲಿ ಯಶೋಧಮ್ಮ ಅಂತಹವರನ್ನು ಬಿಡುತ್ತಾರೆಯೆ? ಊರಿನ ಎಲ್ಲ ಸಂಘಗಳಲ್ಲೂ ಈ ಅಮ್ಮನವರದ್ದೇ ದರ್ಬಾರು. ಅಲ್ಲೆಲ್ಲ ಹೆಣ್ಣು ಹೆತ್ತು ಪಾಪ ಪ್ರಜ್ಞೆಯಿಂದ ನರಳುತ್ತಿರುವ ಮಹಿಳಾ ಮಣಿಗಳು ಅಮ್ಮನವರ ಗೆಳೆತನಕ್ಕಾಗಿ

ಹಂಬಲಿಸುತ್ತಿದ್ದರು. ಅದೂ ಇದೂ ನೆಪ ಹೂಡಿ ತಮ್ಮ ಕನ್ಯಾರತ್ನಗಳೊಂದಿಗೆ ಅಮ್ಮನವರ ಮನೆಗೆ ಹೋದದ್ದೂ ಉಂಟು; ಅವರನ್ನು ತಮ್ಮ ಮನೆಗೆ ಆಮಂತ್ರಿಸಿ ತಮ್ಮ ಪುತ್ರಿಯನ್ನು ಅದಕ್ಕಿಂತಲೂ ಮಿಗಿಲಾಗಿ ತಮಗಿದ್ದ ಅಗಾಧ ಐಶ್ವರ್ಯವನ್ನು ಪ್ರದರ್ಶಿಸಿದ್ದೂ ಉಂಟು.

ಆದರೆ ಅಮ್ಮಾವರ ಮಗ? 'ಚೆನ್ನಾಗಿದ್ದೀಯ ಮರಿ' ಅಂತ ತನ್ನ ತಾಯಿ ವಯಸ್ಸಿನ ಆಂಟಿ ತಲೆ ಸವರಿದರೂ ನಾಚಿ ನೀರಾಗಿಬಿಡ್ತಿದ್ದ. ಅಪ್ಪಿ ತಪ್ಪಿ ಪ್ರಾಯದ ಹುಡುಗಿಯ ವೇಲೋ, ಸಲ್ವಾರ್ ಕಮೀಜೋ ಸೋಂಕಿದರೂ ಬೆದರುಬೊಂಬೆ ತರಹ ದೂರಕ್ಕೆ ಎಗರಿ ಹೋಗ್ತಿದ್ದ. ಇಂತಹ ಸದ್ಗುಣ ಸಂಪನ್ನ, ಶ್ರೀರಾಮಚಂದ್ರನಿಗೆ ಸೀತೆಯಂತಹ ಹುಡುಗಿಯನ್ನೇ ತರಬೇಕು ಅಂತ ಮನಸ್ಸಿನಲ್ಲೇ ಅಮ್ಮಾವ್ರು ತೀರ್ಮಾನ ಕೈಗೊಳ್ಳುತ್ತಿದ್ದರು.

ಈ ಸೀತೆ ಎಲ್ಲಿದ್ದಾಳೋ? ಪಾತಾಳಗರಡಿ ಹಾಕಿ ಹುಡುಕುವುದಕ್ಕೂ ಅಮ್ಮನವರು ಸಿದ್ಧ ಇದ್ದರು.

ಹೆಣ್ಣು ಹುಡುಕೋ ಪದ್ಧತಿ ಲಾಗಾಯ್ತಿನಿಂದಲೂ ಇದೆ. ಹಿಂದೆ ಹೆಣ್ಣು ನೋಡಲು ಹೋದಾಗ ಆಕೆಯ ದೇಹದಾರ್ಢ್ಯ ವೀಕ್ಷಿಸುತ್ತಿದ್ದರು. ಆಕೆ ಮನೆ ಕೆಲಸ ನೀಗಿಸುವಳೆ ಎಂದು ಪರೀಕ್ಷಿಸುವುದು ಅವರ ಉದ್ದೇಶ ಆಗಿತ್ತು. ನಂತರದ ದಿನಗಲ್ಲಿ ಹೆಣ್ಣು ಗಟ್ಟಿಮುಟ್ಟಾಗಿದ್ದರೆ ಪ್ರಯೋಜನ ಇಲ್ಲ, ತೆಳ್ಳಗೆ ಬೆಳ್ಳಗೆ ನೀಟಾಗಿರಬೇಕು ಅನ್ನೋ ಜ್ಞಾನೋದಯ ಆಯಿತು. ಹೆಣ್ಣಿನ ಸಂಗೀತ ಜ್ಞಾನದ ಪರಾಮರ್ಶೆ ಮಾಡಲು ಆರಂಭಿಸಿದರು.

ಇದೆಲ್ಲ ಓಬೀರಾಯನ ಕಾಲದ ಹೆಣ್ಣಿನ ಪರೀಕ್ಷಾ ವಿಧಾನ. ಈಗ ಏನಿದ್ದರೂ 'ಹೆಣ್ಣು ಮಗೂಗೆ ಕೀಬೋರ್ಡಿನ ಮೇಲೆ ಕೈ ಆಡಿಸೋಕೆ ಬರುತ್ತ' ಅಂತ ನೋಡ್ತಾರೆ, ಇದರ ಉದ್ದೇಶ ಸ್ಪಷ್ಟ; ಕಂಪ್ಯೂಟರ್ ಕಲಿತಿದ್ದರೆ ಅಮೆರಿಕಕ್ಕೆ ಹಾರಿ ಗಂಡ ಹೆಂಡತಿ ಹಣ ಗೋರಬಹುದು!

ಯಶೋಧಮ್ಮನವರೂ ಇಂತಹ ಉದ್ಯೋಗ ಸಂಪನ್ನೆ ಕನ್ಯೆಯ ತಲಾಷಿನಲ್ಲಿದ್ದರು.

ಈ ನಡುವೆ ಮಗ ಏಳನೇ ಸೆಮಿಸ್ಟರಿಗೆ ಬಂದಿದ್ದ. 'ಮನೇಲೆ ಕಂಪ್ಯೂಟರ್ ಇದ್ದರೆ ಕಲಿಯೋಕೆ ಅನುಕೂಲ' ಅನ್ನೋ ಬೇಡಿಕೆಯನ್ನು ತಾಯಿಯ ಮುಂದಿಟ್ಟ. ಮುದ್ದಿನ ಮಗನ ಯಾವುದೇ ಬೇಡಿಕೆಯನ್ನ ಅಮ್ಮಾವ್ರು ತಿರಸ್ಕರಿಸಿದ್ದುಂಟೆ? ಇಂಟರ್‌ನೆಟ್ ಕನೆಕ್ಷನ್ನು ಅದೂ ಇದೂಂತ ಒಂದು ಲಕ್ಷ, ಕೈ ಬಿಡ್ತು ಅನ್ನುವುದು

ಅಲಾಯಿದ ಮಾತು. ತಮ್ಮ ಅಂತಸ್ತಿನ ಪ್ರದರ್ಶನಕ್ಕೆ ಮತ್ತೊಂದು ಸಾಧನ ಸಿಕ್ಕಿತ್ತು. ಮಹಿಳಾ ಮಣಿಗಳ ಸಮಾಜದಲ್ಲಿ ಅಮ್ಮಾವರ ಗೌರವ, ಪ್ರತಿಷ್ಠೆಗಳು ಆಚಂದ್ರಾರ್ಕವಾಗಿ ಬೆಳಗಲಾರಂಭಿಸಿತು.

ಇತ್ತ ಮಗರಾಜ ಕಂಪ್ಯೂಟರಿನಲ್ಲಿಯೇ ಮುಳುಗಿಹೋದ. ಕಾಲೇಜಿನ ವೇಳೆ ಹೊರತು ಮಿಕ್ಕೆಲ್ಲ ವೇಳೆಯಲ್ಲೂ ಅವನಾಯಿತು ಅವನ ಕಂಪ್ಯೂಟರ್ ರೂಂ ಆಯಿತು. ತನ್ನ ಅಭ್ಯಾಸಕ್ಕೆ ತೊಂದರೆಯಾಗುತ್ತದೆ ಎಂದು ಇದ್ದ ಒಬ್ಬಿಬ್ಬರು ಸ್ನೇಹಿತರಿಗೂ ಮನೆಯಲ್ಲಿದ್ದೂ ಇಲ್ಲ ಅನ್ನಿಸಿಕೊಂಡ. ತನ್ನ ಕುಮಾರ ಕಂಠೀರವನ ಕಲಿಕಾಸಕ್ತಿಯನ್ನು ನೋಡಿ ಅಮ್ಮನವರು ತೃಪ್ತಿಯಿಂದ ಬೀಗಿದರು. ಪರಿಚಯದವರ ಸಂಗಡ ಮಗನ ಈ ಕಲ್ಯಾಣ ಗುಣದ ಬಗ್ಗೆ ಹೆಮ್ಮೆಯಿಂದ ಕೊಚ್ಚಿಕೊಂಡದ್ದೂ ಉಂಟು.

ಎಂದಿನಂತೆ ಅವತ್ತಿನ ಸಂಜೆಯೂ ಮಗರಾಜ ಕಂಪ್ಯೂಟರ್ ರೂಂ ಸೇರಿದ್ದ. ಕಾಫಿ ಕುಡಿಯಲು ಬರುವಂತೆ ತಾಯಿ ಕೂಗಿದ್ದೂ ಕಂಪ್ಯೂಟರ್ ಪ್ರೇಮಿಯ ಕಿವಿಯ ಮೇಲೆ ಬಿದ್ದ ಹಾಗೆ ಕಾಣಿಸಲಿಲ್ಲ. ಇವನು ಏನು ಮಾಡ್ತಾ ಇದಾನೆ ಅನ್ನೊ ಕುತೂಹಲ ಕೆರಳಿತು ಅಮ್ಮನವರಿಗೆ. ವಂಶೋದ್ಧಾರಕನ ಕಂಪ್ಯೂಟರ್ ರೂಂ ಬಳಿಗೆ ಹೋದರು. ಯಾವತ್ತೂ ರೂಮಿನ ಬಾಗಿಲು ಹಾಕಿಕೊಂಡೇ ಇರುತ್ತಿದ್ದ ಅವತ್ತು ಅರ್ಧ ತೆರೆದೇ ಇದ್ದ. ಅಮ್ಮನವರು ಮೆಲ್ಲನೆ ರೂಮಿನೊಳಕ್ಕೆ ನುಸಳಿದರು.

ಸಾಮಾನ್ಯವಾಗಿ ಇಂತಹ ಸಂದರ್ಭಗಳಲ್ಲಿ ಪುರುಷಪ್ರಾಣಿಯ ಆರನೆ ಇಂದ್ರಿಯ ಜಾಗೃತವಾಗುತ್ತದಂತೆ. ಹೆಣ್ಣಿನ ಸೀರೆಯ ಸರಸರ ಶಬ್ದ, ಬಳೆಗಳ ಕಿಲ ಕಿಲ ನಾದ, ಸುವಾಸನಾ ಭರಿತ ಸ್ನೋ ಪೌಡರುಗಳ ವಾಸನೆ ಅವನಿಗೆ ಸ್ತ್ರೀ ಆಗಮನದ ಅರಿವು ಉಂಟು ಮಾಡುತ್ತದಂತೆ. ಆದರೆ ಕಂಪ್ಯೂಟರ್ ಆರಾಧನೆಯಲ್ಲಿದ್ದ ಯುವಕನ ಆರನೆ ಇಂದ್ರಿಯವೂ ಮರಣ ಶಯ್ಯೆಯಲ್ಲಿ ಮಲಗಿತ್ತು.

ತಮ್ಮ ಆಗಮನವನ್ನೇ ಅರಿವಿಗೆ ತರದಿರುವಷ್ಟು ಆಸಕ್ತಿ ಕೆರಳಿಸಿದ, ಪಂಚೇಂದ್ರಿಯಗಳಲ್ಲಿ ಚತುರ್ ಇಂದ್ರಿಯಗಳನ್ನು ನಿಸ್ತೇಜನಗೊಳಿಸಿರುವ ಆಸಮ್ಮೋಹನ ಶಕ್ತಿ ಯಾವುದು? ಕಂಪ್ಯೂಟರ್ ತೆರೆಯ ಮೇಲೆ ಪ್ರದರ್ಶಿತಗೊಳ್ಳುತ್ತಿರುವ ಆ ಅಭೂತಪೂರ್ವ ದೃಶ್ಯ ಕಾರ್ಯ ಎಂತಹದ್ದಿರಬಹುದು?

ಅಮ್ಮನವರಿಗೆ ಸಹಿಸಲಾರದ ಕುತೂಹಲದಿಂದ ಎದೆ ಡವಗುಟ್ಟಿತು. ಎದೆಯ ಮೇಲೆ ಕೈ ಇಟ್ಟು ಇಣಿಕಿ ನೋಡಿದರು.

ಅಲ್ಲಿ ಅವರು ಕಂಡದ್ದೇನು?

ತಮ್ಮ ಶ್ರೀರಾಮಚಂದ್ರನಂತಹ ವಂಶೋದ್ಧಾರಕ ಇಹ ಪರಪಂಚವನ್ನೇ ಸಂಪೂರ್ಣವಾಗಿ ಮರೆತು ತನ್ನ ಗಮನವನ್ನೆಲ್ಲ ಕಂಪ್ಯೂಟರ್ ಸ್ಕ್ರೀನಿನ ಮೇಲೆ ಕೇಂದ್ರೀಕರಿಸಿ ನಿಟ್ಟುಸಿರು ಬಿಡುತ್ತಾ ಕುರ್ಚಿಯಲ್ಲೇ ಅತ್ತ ಇತ್ತ ಮುಲುಕಾಡುತ್ತಿದ್ದಾನೆ.

ತೆರೆಯ ಮೇಲೆ...

ಯಾವುದೋ ಬ್ಲೂ ಫಿಲಂ!

ಅಶ್ಲೀಲ ಭಂಗಿಯ ಚಿತ್ರ ನೋಡುತ್ತಾ ನೋಡುತ್ತಾ ಅಮ್ಮನವರಿಗೆ ವಾಕರಿಕೆ ಬರುವ ಹಾಗಾಯ್ತು. ತಲೆ ಸುತ್ತು ಬಂತು.

ಪಾಪ ಯಶೋಧಮ್ಮನವರಿಗೆ ಅಷ್ಟು ಮಾತ್ರ ನೆನಪು

ಈಗ ಅಮ್ಮನವರು ಯಾಕೋ ಬೆಪ್ಪಾದಂತೆ ಕಾಣಿಸ್ತಾರೆ!



''ನನಗೂ ಸಹಸ್ರ ಚಂದ್ರ ದರ್ಶನ ಆಗಿದೇ ಅಂತ ಹೇಳ್ದ!''

# ಚುಮ್ಮಿ, ಚುಮ್ಮಣ್ಣಿ

– ನಾಚಿ

ಎರಡು ವಾರಗಳ ಹಿಂದೆ ಎಷ್ಟು ಹಾಯಾಗಿದ್ದೆ ನಾನು! ಇಷ್ಟು ದೊಡ್ಡ ಸಮಸ್ಯೆ ನಂಗೆ ಬರುತ್ತೆ ಅಂತ ಖಂಡಿತಾ ಎಣಿಸಿರಲಿಲ್ಲ. ಆದದ್ದು ಇಷ್ಟೇ. ನಮ್ಮಕ್ಕನ ಮೊಮ್ಮಗಳು ಸುಮ ಎಸ್.ಎಸ್.ಎಲ್.ಸಿ.ಯಲ್ಲಿ ಫಸ್ಟ್‌ಕ್ಲಾಸಿನಲ್ಲಿ ಪಾಸಾಗಿದ್ದಳು. ಅವಳನ್ನ ಖುದ್ದಾಗಿ ಕಂಡು ಅಭಿನಂದಿಸೋಣ ಅಂತ ಎರಡು ವಾರದ ಹಿಂದೆ ನಮ್ಮಕ್ಕನ ಮನೆಗೆ ಹೋದೆ. ಸುಮ ಸಪ್ಪೆ ಮುಖ ಹಾಕಿಕೊಂಡು ವರಾಂಡದಲ್ಲೇ ಕೂತಿದ್ದಳು. ''ಫಸ್ಟ್‌ಕ್ಲಾಸ್ ಬಂದರೂ ಯಾಕೇ ಈ ಹ್ಯಾಪ್‌ಮೋರೇ?'' ಅಂ. ನನ್ನ ಧ್ವನಿ ಕೇಳಿ ನಮ್ಮಕ್ಕ ಬಂದು ''ನಾನು ಹೇಳ್ತೀನಿ ಕೇಳು. ಇನ್ನೇನಿಲ್ಲ. ಇವಳ ಸ್ನೇಹಿತೆಲ್ಲಾ ಎಸ್.ಆರ್.ಕೆ.ಜೂನಿಯರ್ ಕಾಲೇಜಿಗೆ ಸೇರಿದ್ದಾರೆ. ಇಳೂ ಅಲ್ಲೇ ಸೇರ್ಬೇಕಂತೆ. ಇವಳಿಗೆ ಸೀಟು ಸಿಗಲ್ವಲ್ಲಾ ಅಂಥ ಒಂದೇ ಸಮನೆ ಅಳ್ತಿದಾಳೆ'' ಅಂದಳು. ಮಾರ್ಕ್ಸ್ ಎಷ್ಟು ಬಂದಿದ ಅಂದದ್ದಕ್ಕೆ ಎಂಬತ್ತೈದು ಪರ್ಸೆಂಟು ಅಂದಳು. ''ಎಂಭತ್ತೈದು ಪರ್ಸೆಂಟು ಬಂದರೂ ಯಾಕೆ ಸೀಟು ಕೊಡೋಲ್ಲ ನಾನು ನೋಡ್ತೀನಿ. ಸೀಟು ಕೊಡಿಸೋದು ನನ್ನ ಜವಾಬ್ದಾರಿ. ಸೀಟು ಸಿಕ್ಕಿದೆ ಅಂದುಕೊಂಡು ಹಾಯಾಗಿರು'' ಅಂತ ಸುಮನ್ನ ಸಮಾಧಾನಮಾಡಿ ಬಂದೆ.

ಈ ಸಮಸ್ಯೆಯ ಪೂರ್ಣ ಸ್ವರೂಪ ನನಗೆ ದರ್ಶನವಾದದ್ದು ಎರಡು ದಿನಗಳ ನಂತರ. ಸುಮಳ ಮಾರ್ಕ್‌ಕಾರ್ಡ್ ತಗೊಂಡು ಜರ್ಬಾಗಿ ಜೂನಿಯರ್ ಕಾಲೇಜಿನ ಪ್ರಿನ್ಸಿಪಾಲರನ್ನೇ ನೋಡಲು ಹೋದೆ. ಪ್ರಿನ್ಸಿಪಾಲರ ರೂಮು ಯಾವುದೋ ಮಲ್ಟಿನಾಷನಲ್ ಕಂಪನಿಯ ಡೈರೆಕ್ಟರರ ರೂಮಿನಂತೆ ಶೋಭಿಸುತ್ತಿತ್ತು. ಹೊರಗಡೆ ರಿಸೆಪ್ಷನಿಸ್ಟ್, ದರ್ಶನಕ್ಕೆ ಬಂದವರಿಗಾಗಿ ಕುರ್ಚಿಗಳು, ಇವೆಲ್ಲಾ ನೋಡಿದಾಗಲೇ ಸ್ವಲ್ಪ ಭಯವಾಯ್ತು. ನನಗೆ ಅಪಾಯಿಂಟ್‌ಮೆಂಟ್ ಇಲ್ಲದ್ದರಿಂದ ಒಂದು ಗಂಟೆ ಕಾಯಿಸಿ ಒಳಕ್ಕೆ ಬಿಟ್ಟರು. ಪ್ರಿನ್ಸಿಪಾಲರು, ಪುಲ್‌ಸೂಟು ಟೈ ನಲ್ಲಿ, ಭಾರಿ ಮೇಜಿನ ಹಿಂದೆ ತಿರುಗುವ ಕುರ್ಚಿಯಲ್ಲಿದ್ದರು, ''ಯಸ್? ವಾಟ್ ಡು ಯು ವಾಂಟ್?'' ಅಂತ ಕೇಳಿದರು. ನಮ್ಮ ಹುಡುಗಿಗೆ ಎಂಭತ್ತೈದು ಪರ್ಸೆಂಟ್ ಬಂದಿದೆ. I ಪಿ.ಯು.ಸಿ.ಗೆ ಸೀಟು ಬೇಕು ಅಂತ ಮಾರ್ಕ್ಸ್‌ಕಾರ್ಡು ಮುಂದೆ ಹಿಡಿದೆ. ಪ್ರಿನ್ಸಿಪಾಲರು ಆ ಕಡೆ ತಿರುಗಿಯೂ ನೋಡದೆ ''ಸ್ಸಾರಿ. ನಾವು ಯಾವ ವರ್ಷವೂ ತೊಂಭತ್ತು

ಪರ್ಸೆಂಟ್‌ಗಿಂತ ಕಡಿಮೆ ಬಂದಿರುವವರನ್ನು ಸೇರಿಸಿಯೇ ಇಲ್ಲ. ಈ ವರ್ಷ ತೊಂಭತ್ತೆರಡಕ್ಕೇ ನಿಲ್ಲಬಹುದು'' ಅಂತ ಹೇಳಿದಾಗ ನನಗೇನೂ ತೋಚದೆ ವಾಪಸಾದೆ.

ನಮ್ಮಕ್ಕನಿಗೆ, ಸುಮಳಿಗೆ, ಸೀಟು ಕೊಡಿಸ್ತೀನಿ ಅಂತ ಜೋರಾಗಿ ಹೇಳಿ ಬಂದಿದ್ದೀನಲ್ಲ, ಮರ್ಯಾದೆ ಹೇಗಪ್ಪಾ ಉಳಿಸಿಕೊಳ್ಳೋದು ಅಂತ ಯೋಚನೆ ಮಾಡ್ತಾ ಇದ್ದಾಗಲೇ ಚಂದ್ರು ಬಂದ. ಅವನ ಹತ್ತಿರ ನನ್ನ ಗೋಳನ್ನೆಲ್ಲಾ ಹೇಳಿಕೊಂಡೆ. ಎಲ್ಲಾ ಕೇಳಿದ ಮೇಲೆ ಅವರು ''ಸರಿ! ನಿನಗೆ ಕಂಠಿನೇ ಗತಿ. ಬೇರೆ ಮಾರ್ಗವೇ ಇಲ್ಲ'' ಅಂದ. ಏನು ಕಂಠಿಗೆ ಆ ಕಾಲೇಜಿನ ಪ್ರಿನ್ಸಿಪಾಲರು ಗುರುತೇ ಅಂತ ಕೇಳಿದ್ದಕ್ಕೆ ''ಅದೆಲ್ಲಾ ನನಗೆ ಗೊತ್ತಿಲ್ಲ. ಅವನ ಬ್ರೈನ್ ಒಂದು ಕಂಪ್ಯೂಟರ್ ತರಹ. ಏನೇನೋ ವಿಷಯಗಳು, ಯಾರ್‍ಯಾರೋ ಹೇಳಿದ್ದು, ಎಲ್ಲೋ ಓದಿದ್ದು, ಎಲ್ಲಾ ಅವನ ಕಂಪ್ಯೂಟರ್ ಬ್ರೈನ್‌ಗೆ ಹೋಗಿರತ್ತೆ. ಅದನ್ನ ಉಪಯೋಗಿಸಿಕೊಂಡು ಏನು ಬೇಕಾದರೂ ಸಾಧಿಸ್ತಾನೆ. ಅದರಿಂದಲೇ ಎಂಥೆಂಥಾ ಅಸಾಧ್ಯವಾದ ಕೆಲಸಗಳೆಲ್ಲಾ ಅವನಿಗೆ ಸಾಧ್ಯ. ಇಂಥಾ ಬ್ರೈನ್ ಇರೋದರಿಂದಲೇ ಕಂಠಿ ಕೇಶವನಿಗೆ ಬಾಡಿಗೆ ಮನೆ ಕೊಡಿಸೊದಕ್ಕೆ ಸಾಧ್ಯವಾಯ್ತು.''

''ಯಾವ ಮನೆ? ಲಕ್ಷ್ಮೀಪುರದ ಅರಸರ ಮನೆ ಔಟ್‌ಹೌಸಾ?'' ಅಂದೆ

''ಹೌದು! ಅದೇ''

''ಅದ್ಹ್ಯಾಗೆ ಸಿಗ್ತು? ಯಾವತ್ತೂ ಬಾಡಿಗೆಗೆ ಕೊಟ್ಟೆ ಇರಲಿಲ್ವಲ್ಲಾ?''

''ಅದೇ ನೋಡು ಕಂಠಿ ಕರಾಮತ್ತು. ಕೇಶವ ನನಗೆ ಎಲ್ಲಾ ಹೇಳಿದ. ಕಂಠಿನ ಕರೆದುಕೊಂಡು ಅರಸರ ಮನೆಗೆ ಹೋಗಿ ಬಾಗಿಲು ತಟ್ಟಿದಾಗ ಒಬ್ಬರು ಅಜ್ಜಿ ಬಾಗಿಲು ತೆಗೆದು ಯಾರಪ್ಪಾ ನೀವು ಅಂತ ಕೇಳಿದರಂತೆ. ಇದು ಹಿಂದಿನ ಸರ್ದಾರ್ ಗೋಪಾಲರಾಜೇ ಅರಸರ ಮನೆ ಅಲ್ವೇ ಅಂದನಂತೆ ಕಂಠಿ. ಅಜ್ಜಿ ಹೌದ್ಪಾ ನಿಮಗೆ ಹೇಗೆ ಗೊತ್ತು ಅಂದರಂತೆ. ಆಗ ಕಂಠಿ ಕೇಶವನ ಕಡೆ ತಿರುಗಿ ''ನಾವು ಈ ಮನೇಲಿ ಕಾಲಿಡೋಕ್ಕೂ ಪುಣ್ಯ ಮಾಡಿರ್ಬೇಕು ಕಣೋ, ಇದು ನಾಲ್ವಡಿ ಕೃಷ್ಣರಾಜ ಒಡೆಯರು ಆಗಾಗ್ಗೆ ಬರುತ್ತಿದ್ದ ಮನೆ ಅಂತ ನಮ್ಮ ತಾತ ಹೇಳ್ತಾ ಇದ್ದರು'' ಅಂದಾಗ ಅಜ್ಜಿಗೆ ತುಂಬಾ ಖುಷಿಯಾಯ್ತಂತೆ. ಮುಂದುವರೆದು ಕಂಠಿ ಕೇಳಿದನಂತೆ ''ನಾಲ್ವಡಿ ಕೃಷ್ಣರಾಜ ಒಡೆಯರು ನಿಮ್ಮ ಮನೆ ಉಯ್ಯಾಲೇಲಿ ಕೂತುಕೋತಿದ್ದರಂತೆ ಹೌದೇ ಅನ್ನುತ್ತಲೂ ಅಜ್ಜಿಗೆ ಇನ್ನೂ

ಸಂತೋಷವಾಗಿ ಒಳಕ್ಕೆ ಬನ್ನಿ ತೋರಿಸ್ತೀನಿ ಅಂತ ಹೇಳಿ ಉಯ್ಯಾಲೇನೂ ತೋರಿಸಿದರಂತೆ. - ಇನ್ನು ಮುಂದೆ ಏನೂ ಹೇಳ್ಬೇಕಾಗಿಲ್ಲ. ನಿಮ್ಮಂಥವರು ನೆರೆ ಇದ್ದರೆ ನನಗೂ ಒಳ್ಳೆಯದು. ಬನ್ನಿ ಸುಣ್ಣ, ಬಣ್ಣ ಮಾಡ್ಸಿರ್ತೀನಿ ಔಟ್ ಹೌಸ್‌ಗೆ ಅಂದರಂತೆ.''

ಇದನ್ನ ಕೇಳಿದ ಮೇಲೆ ನಾನೂ ಕಂಠೀನೇ ಹಿಡಿಯೋದು ಅಂತ ತೀರ್ಮಾನಿಸಿದೆ. ಆದರೂ, ಕಂಠಿನ ನೆನೆಸಿಕೊಂಡರೆ, ಹೇಗಪ್ಪಾ ಇವನನ್ನ ಕರೆದುಕೊಂಡು ಹೋಗೋದು ಅಂತ ಒಂದೊಂದು ಸಲ ಮನಸ್ಸು ಹಿಂದೇಟು ಹಾಕ್ತಿತ್ತು. ಕಾರಣ, ಅವನ ಅವತಾರ. ಕಂಠಿದು ಯಾವಾಗಲೂ ಒಂದೇ ಡ್ರೆಸ್ಸು. ದಟ್ಟಿ ಪಂಚೆ, ದೊಗಳೆ ಜುಬ್ಬ. ಮಹಾ ಒರಟ. ಸ್ವಲ್ಪವೂ ನಯ ನಾಜೂಕು ಇಲ್ಲ. ಇವನನ್ನ ಆ ಫುಲ್ ಸೂಟಿನ ಪ್ರಿನ್ಸಿಪಾಲರ ಮುಂದೆ ಕರೆದುಕೊಂಡು ಹೋಗಬೇಕಲ್ಲ ಅಂತ ಅನ್ನಿಸಿತು. ದೇವ್ರೇಗತಿ, ಹೇಗಾದರಾಗಲಿ ಅಂತ ಮಾರನೇ ದಿನವೇ ಕಂಠಿನ ಕರೆದುಕೊಂಡು ಆ ಕಾಲೇಜಿಗೆ ಹೋಗುವುದು ಅಂತ ನಿರ್ಧಾರ ಮಾಡಿದೆ.

ಬೆಳಿಗ್ಗೆ ಒಂಭತ್ತಕ್ಕೇ ಕಂಠಿ ಮನೆಗೆ ಹೋದೆ, ಅವನ ಮಾಮೂಲು ಡ್ರೆಸ್‌ನಲ್ಲೇ ಇದ್ದ. ಸಾಲದ್ದಕ್ಕೆ ಮುಖದ ಮೇಲೆ ಒಂದು ವಾರದ ಗಡ್ಡ ಚೆನ್ನಾಗಿ ಬೆಳೆದಿತ್ತು. ಅವನಿಗೆ ನನ್ನ ಸಮಸ್ಯೆ ಎಲ್ಲಾ ವಿವರವಾಗಿ ಹೇಳಿದೆ. ನಡಿ ಹೊರಡೋಣ ಅಂದ. ನನ್ನ ಸಮಾಧಾನಕ್ಕೆ ಬಟ್ಟೆ ಹಾಕಿಕೊಂಡು ಬಾ ಅಂದೆ. ಈಗಿರೋ ಡ್ರೆಸ್ ಏನಾಗಿದೆ? ಬಾ ಹೋಗೋಣ ಅಂತ ಹಾಗೇ ಹೊರಟುಬಿಟ್ಟ. ಅವನ ಹಿಂದೆ ಕುರಿ ಹಾಗೆ ನಾನೂ ಹಿಂಬಾಲಿಸಿದೆ.

ಕಾಲೇಜು ತಲುಪಿದಾಗ ಹತ್ತೂ ಕಾಲು. ರಿಸೆಪ್ಷನ್‌ನಲ್ಲಿ ಇಬ್ಬರು ಕಾಯುತ್ತಾ ಇದ್ದರು. ಪ್ರಿನ್ಸಿಪಾಲರ ರೂಮಿಗೆ ಇನ್ನೂ ಯಾರನ್ನೂ ಬಿಟ್ಟಿರಲಿಲ್ಲ. ಕಂಠಿ ಸೀದಾ ರಿಸೆಪ್ಷನಿಸ್ಟ್ ಬಳಿ ಹೋಗಿ ''ನಿಮ್ಮ ಪ್ರಿನ್ಸಿಪಾಲರ ಮನೆ ಎಲ್ಲಿದೆ?'' ಅಂತ ಜೋರಾಗಿ ಕೇಳಿದ, 'ಒಂಟಿ ಕೊಪ್ಪಲಿನಲ್ಲಿ, ಮೇನ್ ರೋಡಲ್ಲಿ ಸಾರ್, ಪೋಸ್ಟ್ ಆಫೀಸ್ ಪಕ್ಕದ್ದು'' ಅಂದಳು. ''ಕೆಂಪು ಮನೆ ಅಲ್ವೆ?'' ಅಂದ ಹೌದು ಸಾರ್ ಅದೇ ಅಂದಾಗ, ಕಂಠಿ ''ಬಾರೊ ಗೊತ್ತಾಯ್ತು'' ಅಂದು ನನ್ನನ್ನೂ ಎಳಕೊಂಡು ಪ್ರಿನ್ಸಿಪಾಲರ ರೂಮಿನ ಬಾಗಿಲನ್ನ ತಳ್ಳಿಕೊಂಡು ದನ ಹಾಗೆ ನುಗ್ಗೇಬಿಟ್ಟ. ನಾನೂ ಅವನ ಹಿಂದೆ ಹೋಗಲೇಬೇಕಾಯ್ತು. ಸಾರ್, ಸಾರ್ ಅಂತ ಹಿಂದೆಯೇ ರಿಸೆಪ್ಷನಿಸ್ಟ್ ಗಾಬರಿಯಾಗಿ ಓಡಿ ಬಂದಳು.

''ಹೂ ಆರ್‌ಯು? ಹೇಗೆ ಒಳಗೆ ಬಂದಿರಿ?'' ಅಂತ ಪ್ರಿನ್ಸಿಪಾಲರು ಕೂಗಿದಾಗ ''ನಿಮಗೆ ಗುರುತಿನವರೇನೋ ಅಂತ ಬಿಟ್ಟೆ ಸಾರ್'' ಅಂತ ಭಯದಿಂದ ನಡುಗುತ್ತಾ ರಿಸೆಪ್ಷನಿಸ್ಟ್ ನಿಂತಳು.

ನಾನು ಇನ್ನೇನಪ್ಪಾ ಗತಿ, ಏನೇನು ಬೈಸಿಕೊಳ್ಳಬೇಕೊ, ಈ ಕಂಠಿನ ಕರೆದುಕೊಂಡು ಬಂದನಲ್ಲಾ ಅಂತ ನನ್ನನ್ನೇ ಶಪಿಸಿಕೊಂಡು ತಲೆ ತಗ್ಗಿಸಿ ಕೂತಿದ್ದೆ. ಕಂಠಿ ಮಾತ್ರ ಏನೂ ಆಗೇ ಇಲ್ವೇನೋ ಅಂತ ''ಕಮೀಷನರ್ ರಾಘವೇಂದ್ರರಾಯರ ಮಗ ಅಲ್ವೇ ನೀವು?'' ಅಂದ.

''ಹೌದು. ಅದಕ್ಕೇನಾಗ್ಬೇಕು?'' ಅಂತ ಕೋಪದಿಂದಲೇ ಪ್ರಿನ್ಸಿಪಾಲರು ಗುಡುಗಿದರು.

''ಪಾಂಡು ಅಲ್ವೇ?'' ಅಂದ ಕಂಠಿ.

''ಅಲ್ಲ. ಪಾಂಡು ನಮ್ಮಣ್ಣ''

''ಓ ಗೊತ್ತಾಯ್ತು. ಚುಮ್ಮೀ... ಚುಮ್ಮೀ'' ಅಂತ ಜೋರಾಗಿ ಅಂದ ಕಂಠಿ.

ಇದೇನಪ್ಪಾ ಇವನು ಹುಚ್ಚು ಹುಚ್ಚಾಗಿ ಆಡ್ತಿದ್ದಾನಲ್ಲ ಅಂತ ಗಾಬರಿಯಾದೆ, ಯಾಕೆ ಪ್ರಿನ್ಸಿಪಾಲರು ಸುಮ್ಮನಿದ್ದಾರಲ್ಲ ಅಂತ ನಿಧಾನವಾಗಿ ತಲೆ ಎತ್ತಿದೆ. ಪ್ರಿನ್ಸಿಪಾಲರ ಮುಖ ಕೆಂಪಗಾಗಿತ್ತು.

ಕಂಠಿ ಮಾತ್ರ ಜೋರಾಗಿ ಶುರು ಮಾಡಿದ ''ನೋಡೊ, ಇವರ ಹೆಸರು ನರಸಿಂಹಮೂರ್ತಿ ಅಂತ, ಮನೇಲಿ ಇವರ್ನ ಚುಮ್ಮಿ, ಚುಮ್ಮಿ ಅಂತಲೇ ಕರೀತಿದ್ದದ್ದು. ನಮ್ಮ ಚಿಕ್ಕಮ್ಮ ಇವರ ಮನೆ ಪಕ್ಕದ ಮನೇಲೇ ಇದ್ದರು. ನಮ್ಮನೆಗೆ ಬಂದಾಗ ಇವರ ಮನೆ ವಿಷಯ ಎಲ್ಲಾ ಹೇಳ್ತಿದ್ದರು, ಇವರ ಅಜ್ಜಿಗಂತೂ ಇವರನ್ನ ಕಂಡರೆ ಪ್ರಾಣ. ಚುಮ್ಮೀ, ಚುಮ್ಮೀ ಅಂತ ಮುದ್ದು ಮಾಡೋರು. ತುಂಬಾ ಮುದ್ದು ಬಂದಾಗ ಚುಮ್ಮಣ್ಣೀ, ಚುಮ್ಮಣ್ಣೀ ಅಂತಲೂ ಕೂಗೋರು'' ಅಂದ.

ಪ್ರಿನ್ಸಿಪಾಲರ ಮುಖ ಟೊಮೇಟೊ ಆಗಿತ್ತು. ರಿಸೆಪ್ಷನಿಸ್ಟ್ ಗೋಡೆ ಕಡೆ ತಿರುಗಿಕೊಂಡು ನಗು ತಡೆಯಲು ಪ್ರಯತ್ನಿಸುತ್ತಿದ್ದಳು, ನನಗೂ ಧೈರ್ಯ ಬಂದು ತಲೆ ಎತ್ತಿದೆ.

ಕಂಠಿ ಇನ್ನೂ ಮಾತು ಮುಂದುವರಿಸುತ್ತಲೇ ಇದ್ದ ''ಇವರಿಗೆ ಚಿಕ್ಕಂದಿನಿಂದಲೂ ತುಂಬಾ ಕೋಪ, ಹಟ. ತಾನು ಹೇಳಿದ್ದೇ ನಡೀಬೇಕು. ಒಂದು ಸಲ ತನಗೆ ಬೇಕಾದ ಚಡ್ಡಿ ಹಾಕಲಿಲ್ಲ ಅಂಥ ದಿನವೆಲ್ಲಾ ಚಡ್ಡೀನೇ ಹಾಕಿಕೊಳ್ಳಲಿಲ್ಲವಂತೆ.''

ಪ್ರಿನ್ಸಿಪಾಲರು ಮುಖ ತಗ್ಗಿಸಿದ್ದರು, ಬಾಯಿ ಅದರುತ್ತಿತ್ತು.

''ನಿಮಗೆ ಏನಾಗಬೇಕಾಗಿತ್ತು?'' ಅಂತ ಕೇಳಿದರು.

''ಏನಿಲ್ಲ ಚುಮ್ಮಿ, ಇವನ ಕಡೆ ಹುಡುಗಿಗೆ ಎಂಭತ್ತೈದು ಪರ್ಸೆಂಟ್ ಬಂದಿದೆ ಸೀಟು ಕೊಡಿಸಿಬಿಡು'' ಅಂದ.

ಪ್ರಿನ್ಸಿಪಾಲರು ರಿಸೆಪ್ಷನಿಸ್ಟ್ ಕಡೆ ತಿರುಗಿ ''ಅಡ್ಮಿಟ್ ಮಾಡಿ'' ಅಂದರು.

ತತ್‌ಕ್ಷಣವೇ ನಾನು ಗೆದ್ದೆ ಅಂತ ಕಂಠಿನ ಎಳಕೊಂಡು ಆಚೆಗೆ ಬಂದೆ, ಅಡ್ಮಿಷನ್ ಮುಗಿಸಿಕೊಂಡು ಹೊರಗೆ ಬಂದಾಗ ''ಕಂಠೀ, ನಡಿ ರಮ್ಯ ಹೋಟೆಲ್‌ಗೆ ಹೋಗೋಣ, ಬೆಣ್ಣೆ ಮಸಾಲೆ, ಬಾದಾಮಿ ಹಲ್ವ ಕೊಡಿಸ್ತೀನಿ'' ಅಂದೆ.

★★★

## ಅವನದ್ದು

ಬೇವು ಅಯ್ಯೋ ಕಹಿ
ಒಲ್ಲೆ ಅನ್ನ ಬಾರದು
ಬೆಲ್ಲ ಸಿಹಿ ಎಂದು
ಅದನ್ನೆ ತಿನ್ನಬಾರದು
ಬೇವೂ ಅವನದೆ
ಬೆಲ್ಲವೂ ಅವನದೆ
ಎಲ್ಲವೂ ಅವನದೆ
ಸಿಹಿಯಲ್ಲೂ 'ಹಿ' ಇದೆ
ಕಹಿಯಲ್ಲೂ 'ಹಿ' ಇದೆ
HE ಎಂದರೆ ಅವನು!

ಹೆಚ್. ಡುಂಡಿರಾಜ್

# ಚಾರ್ಲಿ ಚಾಪ್ಲಿನ್ 20ನೇ ಶತಮಾನದ ಅದ್ವಿತೀಯ ಹಾಸ್ಯ ನಟ

(ಆಧಾರ: ದಿ ಆರ್ಟ್ ಆಫ್ ಕಾಮೆಡಿ - ನ್ಯೂ ಹೊರೈಜನ್ಸ್)

– ಎಂ.ಎನ್.ಕೆ.

1889 ರಲ್ಲಿ ಜನಿಸಿ 1977 ರಲ್ಲಿ ನಿಧನನಾದ ಚಾರ್ಲಿ ಚಾಪ್ಲಿನ್ ಹೆಸರನ್ನು ಕೇಳದವರೇ ಇಲ್ಲ. ಇತ್ತೀಚೆಗೆ ದಿ ಆರ್ಟ್ ಆಫ್ ಕಾಮೆಡಿ ಪುಸ್ತಕವನ್ನು ಓದಿದಾಗ ಚಾಪ್ಲಿನ್ ಬಗ್ಗೆ ಇನ್ನಷ್ಟು ಮಾಹಿತಿ ಸಿಕ್ಕಿತು, ಅದು ಹೀಗಿದೆ;

ಚಾಪ್ಲಿನ್‌ನ ತಂದೆ ಮತ್ತು ತಾಯಿ ಇಬ್ಬರೂ ನಾಟಕದ ಕಂಪೆನಿಗಳಲ್ಲಿ ಕೆಲಸ ಮಾಡಿದವರು, ತಂದೆ ತನ್ನ ಇಬ್ಬರು ಮಕ್ಕಳು ಮತ್ತು ಹೆಂಡತಿಯನ್ನು ತ್ಯಜಿಸಿ ಹೋದಾಗ ನಮ್ಮ ಚಾಪ್ಲಿನ್‌ಗೆ ಕೇವಲ ಆರು ವಯಸ್ಸು, ಮುಂದೆ ತಾಯಿ ಅನೇಕ ಸಲ ಮನೋರೋಗಿಯಾಗಿ ಆಸ್ಪತ್ರೆಗಳನ್ನು ಸೇರಿದಾಗ ಈ ಇಬ್ಬರು ತಬ್ಬಲಿಗಳಿಗೆ ಸರ್ಕಾರಿ ಅನಾಥಾಶ್ರಮಗಳೇ ಗತಿ. ತನ್ನ ಜೀವನ ಚರಿತ್ರೆಯಲ್ಲಿ ಚಾಪ್ಲಿನ್ ತನ್ನೆಲ್ಲ ಅನುಭವಗಳನ್ನು ಈ ರೀತಿ ಸಂಗ್ರಹಿಸಿದ್ದಾನೆ;

"It is paradoxical that tragedy stimulates the spirit of ridicule... riducule I suppose is an attitude of defiance. We must laugh in the face of our helplessness against the forces of nature... or go insane"

ಚಾರ್ಲಿಯ ತಾಯಿ ಜೀವನದ ಒತ್ತಡಗಳನ್ನು ಸಹಿಸಲಾರದೆ ಹುಚ್ಚಿಯಾದಳು. ಮಗ ಚಾರ್ಲಿ ಅದೇ ಒತ್ತಡಗಳನ್ನು ಅಪಹಾಸ್ಯ ಮಾಡಿ ಮಹಾನ್ ವ್ಯಕ್ತಿಯಾದ. ಹುಚ್ಚರಿಗೂ ಮಹಾನ್ ವ್ಯಕ್ತಿಗಳಿಗೂ ನಡುವೆ ಇರುವದು ಒಂದೇ ಒಂದು ಕೂದಲೆಳೆಯ ವ್ಯತ್ಯಾಸ.

ಅನಾಥಾಲಯದ ಈ ಅಣ್ಣ ತಮ್ಮಂದಿರಿಗೆ ನಾಟಕದ ಗೀಳು. ಚಾರ್ಲಿ ಒಂದು ನಾಟಕದ ಕಂಪೆನಿಯಲ್ಲಿ ಚಿಕ್ಕ ಪಾತ್ರವನ್ನು ಗಿಟ್ಟಿಸಿಕೊಂಡು ತನ್ನ 10ನೇ ವಯಸ್ಸಿನಲ್ಲಿ ನಾಟಕ ರಂಗಕ್ಕೆ ಕಾಲಿಡುತ್ತಾನೆ, ಮತ್ತೆ ಹಿಂದಿರುಗಿ ನೋಡುವುದಿಲ್ಲ, ಸಾಯುವವರೆಗೂ. ಮುಂದೆ ಚಲನ ಚಿತ್ರ ರಂಗದಲ್ಲಿ ಅಪ್ರತಿಮನೆಂದೆನ್ನಿಸಿಕೊಂಡು ಅದೇ ಅನಾಥಾಯಕ್ಕೆ ಬಂದು ಅಲ್ಲಿನ ಮಕ್ಕಳಿಗೆ ತನ್ನ ಪಾತ್ರಗಳ

ಪರಿಚಯ ಮಾಡಿಸಿದಾಗ ಅಲ್ಲಿನ ಮಕ್ಕಳಿಗೆ ಇನ್ನೆಷ್ಟು ಹುಮ್ಮಸ್ಸಾಯಿತೋ ಆ ದೇವರೇ ಬಲ್ಲ.

1914 ಚಾಪ್ಲಿಯನ್‌ಗೆ ಪರ್ವ ವರುಷ. ಯಾವುದೋ ಒಂದು ಗುಂಗಿನಲ್ಲಿ ಅವನು ಸ್ಟುಡಿಯೋದ ವೇಷಗಳ ಗುಡಾಣಕ್ಕೆ ನುಗ್ಗಿ, ಒಂದು ದೊಗಲೆ ಪ್ಯಾಂಟ್, ತುಂಬಾ ಚಿಕ್ಕ ಕೋಟ್, ಹ್ಯಾಟ್, ಮತ್ತು ದೊಗಲೆ ಶೂ ಧರಿಸಿ ಕೈಯಲ್ಲಿ ಒಂದು ಸೊಟ್ಟನೆಯ ಬೆತ್ತದ ಕೋಲನ್ನು ಹಿಡಿದು ಈಚೆಗೆ ಬಂದಾಗ, ಅವನ ಟ್ರಾಂಪ್ ಪಾತ್ರ ಸೃಷ್ಟಿಯಾಯಿತು. ಮುಂದೆ ಅವನ 65 ವರುಷಗಳ ಜೀವನದಲ್ಲಿ ಅದು ಅವನ ವ್ಯಕ್ತಿತ್ವದ ಅವಿಭಾಜ್ಯ ಭಾಗ.

ಅದು ಮೂಕೀ ಯುಗ. ಅವಾಗ ಇದ್ದವುಗಳೆಲ್ಲಾ ಸೈಲೆಂಟ್ ಮೂವೀಸ್. ಮುಂದೆ 1926 ರಲ್ಲಿ ಟಾಕೀಗಳು ಬರುವವರೆಗೂ ನಟ ನಟಿಯರು ತಮ್ಮ ಭಾವನೆಗಳನ್ನು ಹಾವ ಭಾವಗಳಲ್ಲೇ ತೋರಿಸಬೇಕಾಗಿತ್ತು. ಟಾಕೀ ಬಂದಾಗ ಅದಕ್ಕೆ ಹೊಂದಿಕೊಳ್ಳಲಾರದೆ ಅನೇಕರು ಚಿತ್ರರಂಗದಿಂದ ಹೊರಬಿದ್ದರು. ಚಾಪ್ಲಿನ್ 1936ರ ವರೆಗೆ ಮೂಕೀಗೇ ಅಂಟುಕೊಂಡು ಕೊನೆಗೆ ತನ್ನ ಟ್ರಾಂಪ್ ಪಾತ್ರ ಮತ್ತು ಮೂಕಿ ಸಿನೆಮಾವನ್ನು ''ಮಾಡ್ರನ್ ಟೈಂಸ್'' ಚಿತ್ರದೊಂದಿಗೆ ಮುಗಿಸಿದ. ಅಲ್ಲಿಗೆ ಅವನ ಟ್ರಾಂಪ್ ಪಾತ್ರವೂ ನಿಂತಿತು.

ನಮ್ಮ ಚಾರ್ಲಿಗೂ ಜರ್ಮನಿಯ ಹಿಟ್ಲರ್‌ಗೂ ವಯಸ್ಸಿನಲ್ಲಿ ಕೇವಲ ನಾಲ್ಕು ದಿನ ವ್ಯತ್ಯಾಸ ಮಾತ್ರ. ಚಾರ್ಲೀ ಗಳಿಸಿದ ಅಪಾರ ಜನಪ್ರಿಯತೆಯನ್ನು ಕಂಡು ಹಿಟ್ಲರನೂ ಚಾರ್ಲಿಯಂತೆ ಮೀಸೆಯನ್ನು ಬಿಟ್ಟನಂತೆ. ಆದರೆ ಅದು ಮುಂದೆ ಹಿಟ್ಲರ್ ಮೀಸೆ ಎಂದೇ ನಾಮಕರಣವಾಯ್ತು. ಚಾರ್ಲೀ ಮೀಸೆ ಅಂತ ಆಗಲಿಲ್ಲ.

ಚಾರ್ಲಿಗೆ ಹಿಟ್ಲರ್‌ನನ್ನು ಕಂಡರೆ ಅಷ್ಟಕ್ಕಷ್ಟೆ. ಚಾರ್ಲಿ ತನ್ನ ಡಿಕ್ಟೇಟರ್ ಸಿನೆಮಾದಲ್ಲಿ ಹಿಟ್ಲರ್ ಮತ್ತು ಮುಸ್ಸೋಲಿನಿ ಇವರನ್ನು ತುಂಬಾ ಲೇವಡಿ ಮಾಡಿದ್ದಾನೆ. ಇದರಿಂದ ಇವನೊಬ್ಬ ಕಮ್ಯೂನಿಸ್ಟ್ ಎನ್ನುವ ಅನುಮಾನ ಬಂದು ಅಂದಿನ ದಿನಗಳಲ್ಲಿ ಅಮೆರಿಕಾದ ಸಿ.ಬಿ.ಐ. ಅವರಿಂದ ಚಾರ್ಲಿ ಅಪಾರ ತೊಂದರೆಗೆ ಒಳಗಾಗಿ ಇಂಗ್ಲೆಂಡಿಗೆ ಒಲಸೆ ಹೋಗಬೇಕಾಗಿ ಬಂತು.

ಚಾಪ್ಲಿನ್ ವಿಷಾದ ಸನ್ನಿವೇಶಗಳಿಗೆ ತಿಳೀ ಹಾಸ್ಯದ ಲೇಪನ ಕೊಟ್ಟಿದ್ದಾನೆ. ಅವನ ಒಂದು ಚಿತ್ರದ ಅಂತ್ಯ ಸನ್ನಿವೇಶ; ಚಾರ್ಲಿ ಪ್ರೀತಿಸಿದ ಹುಡುಗಿ ಬೇರೊಬ್ಬನ ಜೊತೆ ಹೋದಾಗ ಚಾರ್ಲಿ ನದಿಯಲ್ಲಿ ಹಾರಿಕೊಳ್ಳುವ ಸನ್ನಿವೇಶ. ನಿರ್ಮಾಪಕ ''ಇದೇನು ಚಿತ್ರ ದುರಂತವಾಯ್ತಲ್ಲಾ'' ಅಂದಾಗ ಚಾರ್ಲಿ ''ಹಾಗಲ್ಲ. ನಾನು ನದೀಲಿ ಬೀಳ್ತೀನಿ. ನೀವು ಒಬ್ಬ ಕುರೂಪಿ ಹುಡುಗಿಯನ್ನು ಕರೆಸಿ ನನ್ನನ್ನು ನೀರಿನಿಂದ ಎತ್ತಿಹಾಕಿಸಿ. ನನಗೆ ಜ್ಞಾನ ಬಂದಮೇಲೆ ಆ ಕುರೂಪಿಯನ್ನು ನೋಡಿ ಮತ್ತೆ ನೀರಿಗೆ ಹಾರಿಕೊಳ್ಳುತ್ತೇನೆ'' ಎಂದನಂತೆ.

ಇನ್ನೊಂದು ಸನ್ನಿವೇಶ ಹೀಗಿದೆ: ಒಬ್ಬ ಅಂಧ ಮಹಿಳೆ ರಸ್ತೆಯಲ್ಲಿ ಹೂ ಮಾರುತ್ತಿರುತ್ತಾಳೆ. ಅವಳಿಗೆ ತನ್ನ ಕಣ್ಣಿನ ಆಪರೇಶನ್ ಮಾಡಿಸಿಕೊಳ್ಳಲು ದುಡ್ಡಿಲ್ಲ. ಆ ದುಡ್ಡನ್ನು ಚಾಪ್ಲಿನ್ ಒಟ್ಟುಗೂಡಿಸಿ ಕೊಡುತ್ತಾನೆ. ಆಪರೇಶನ್ ಆದಮೇಲೆ ಅವಳಿಗೆ ಕಣ್ಣು ಬಂತು. ತನಗೆ ಸಹಾಯ ಮಾಡಿದವನನ್ನು ನೋಡಲು ಕಾತುರ. ಅವನೊಬ್ಬ ಶ್ರೀಮಂತನೇ ಇರಬೇಕು, ಅವನು ನೋಡಲು ಸುಂದರವಾದವನೇ ಇರಬೇಕೆಂಬ ಕನಸು ಅವಳದು. ಚಾರ್ಲಿಯನ್ನು ನೋಡಿದ ಮೇಲೆ ಅವಳಿಗಾದ ಆಶಾಭಂಗ ಅಷ್ಟಿಷ್ಟಲ್ಲ. ಅವಳ ಮನಸ್ಸು ಅರ್ಥ ಮಾಡಿಕೊಂಡ ಚಾರ್ಲಿ 'ನಾನು ಅವನಲ್ಲ' ಎಂದು ಹೇಳಿಕೊಂಡು ಜಾರಿಕೊಳ್ಳಲು ನೋಡುತ್ತಾನೆ. ಆದರೆ ಅವನು ಕೊಟ್ಟ ಹಸ್ತಲಾಘವದಿಂದ ಇವನು ಅವನೇ ಎಂದು ಆಕೆ ಕಂಡುಹಿಡಿಯುತ್ತಾಳೆ. ಚಾರ್ಲಿ ಸಿಕ್ಕಿಬೀಳುತ್ತಾನೆ.

ಚಾರ್ಲಿಯ ಮರು ಕೃತಿ ಗೋಲ್ಡ್ ರಶ್. ಇದು 1840 ರಲ್ಲಿ ಕ್ಯಾಲಿಫೋರ್ನಿಯಾದಲ್ಲಿ ಆದ ಚಿನ್ನದ ಅನ್ವೇಷಣೆಯನ್ನು ಕುರಿತ ಹಾಸ್ಯ. 1846 ರಲ್ಲಿ ಚಿನ್ನವನ್ನು ಅರಸುತ್ತಾ ಹೋದ ಅನೇಕರು ಮರುಭೂಮಿಯಲ್ಲಿ ಸತ್ತರು. ಸತ್ತವರ ಮಾಂಸವನ್ನು ತಿಂದು ಬದುಕಿದರು ಇತರರು. ಈ ಹಿನ್ನೆಲೆಯಲ್ಲಿ ಚಾರ್ಲಿ ಸಿನೆಮಾ ರಚಿಸಿದ. ತಿನ್ನಕ್ಕೆ ಏನೂ ಇಲ್ಲದೆ ಚಾರ್ಲಿ ಮತ್ತು ಇತರ ನಟರು ಇವನ ಶೂ ಅನ್ನೇ ಅಡುಗೆ ಮಾಡಿ ತಿಂದ ದೃಶ್ಯ ತೀರಾ ಹಾಸ್ಯಮಯ.

ಚಾರ್ಲಿ ತನ್ನ ಎಡಗೈ ಉಪಯೋಗಿಸುತ್ತಿದ್ದ. ಹೀಗಾಗಿ ಅವನು ಬಾರಿಸುವ ಪಿಟೀಲು ಇತ್ಯಾದಿಗಳನ್ನೆಲ್ಲ ಅವರ ಎಡಗೈಗೆ ಹೊಂದುವಂತೆ ಮಾಡಬೇಕಾಗಿತ್ತು.

ಕಾರ್ಖಾನೆಗಳಿಗೆ ಹೋಗಿ ಬರುವ ಕಾರ್ಮಿಕರನ್ನು ಕುರಿ ಮಂದೆಗೆ ಹೋಲಿಸುತ್ತಿದ್ದ. ತನ್ನ ಮಾಡರ್ನ್ ಟೈಂಸ್ ಸಿನೇಮಾದಲ್ಲಿ ಕಾರ್ಖಾನೆಯ ಕೆಲಸವನ್ನು ಲೇವಡಿ ಮಾಡಿದ್ದಾನೆ. ಈ ಸಿನೆಮಾದಲ್ಲಿ ಇವನೊಬ್ಬ ಕೆಲಸಗಾರ. ಇವನ ಕೆಲಸ ತನ್ನ ಎರಡೂ ಕೈಗಳನ್ನು ಉಪಯೋಗಿಸಿ ಬೋಲ್ಟ್‌ಗಳನ್ನು ತಿರಿಗಿಸುವುದು. ಇದು ಎಲ್ಲಿವಯರೆಗೆ ಹೋಯಿತೆಂದರೆ ಇವ ಕಾರ್ಖಾನೆಯಿಂದ ಹೊರಬಂದರೂ ಇವನ ಎರಡೂ ಕೈಗಳು ಆಡುತ್ತಲೇ ಇದ್ದುವು. ಪರಿಣಾಮ ರಸ್ತೆಯಲ್ಲಿ ಇದಿರು ಬಂದ ಹುಡುಗಿಯ ರವಕೆಯ ಗುಂಡಿಗಳ ಮೇಲೆ ಇವನ ಕೈಗಳಾಡಿದಾಗ ಅವಳಿಂದಾದ ''ಕಪಾಳ ಮೋಕ್ಷದಿಂದ'' ಇವನ ಎರಡೂ ಕೈಗಳೂ ಈ ಬೋಲ್ಟ್ ತಿರುವಿನಿಂದ ಮೋಕ್ಷಗೊಳ್ಳುತ್ತವೆ.

ಚಾರ್ಲಿಯ ವೈಯಕ್ತಿಕ ಜೀವನ ಅವನ ಸಿನೆಮಾ ರಂಗದಷ್ಟೇ ಗಲಿಬಿಲಿ. ಸುಮಾರು 1930 ರಲ್ಲಿ ಒಬ್ಬ ಪತ್ನಿಯ ಜೊತೆ ವಿವಾಹ ವಿಚ್ಛೇದನವಾದಾಗ ಇವನು

ಆಕೆಗೆ ಆರೂವರೆ ದಶಲಕ್ಷ ಡಾಲರ್ ದಂಡ ತೆರಬೇಕಾಯಿತು. 1943 ರಲ್ಲಿ ತನಗಿಂತಾ ತುಂಬಾ ಚಿಕ್ಕವಳಾದ ಊನಾ ಓನೀಲ್‌ಳನ್ನು ಮದುವೆಯಾಗುವ ಮೊದಲು ಇವನಿಗೆ ನಾಲ್ಕಾರು ಬಾರಿ ಮದುವೆಯಾಗಿತ್ತು. ಜೊತೆಗೆ ನಾಲ್ಕು ಮಕ್ಕಳಾಗಿತ್ತು. ಊನಾಳ ಜೊತೆ ಇವನು ಮಾಡಿದ 36 ವರುಷಗಳ ಸಂಸಾರದಲ್ಲಿ ಇವನಿಗೆ 8 ಮಕ್ಕಳಾದವು. ಊನಾ ಇವನ ಜೀವನದಲ್ಲಿ ಒಂದು ಸ್ಥಿರತೆ ಒದಗಿಸಿ ಇವನಿಗೆ ನೆಮ್ಮದಿ ಬರುವಂತೆ ಮಾಡಿದಳು.

1942 ರಲ್ಲಿ ಚಾರ್ಲಿ ಮಾನ್ಸಿಅರ್ ವರ್ಡೋ ಎನ್ನುವ ವಿಡಂಬನಾತ್ಮಕ ಸಿನೆಮಾ ರಚಿಸಿದ. ಇದರ ಹಿನ್ನೆಲೆ: ತನ್ನ ಎಲ್ಲಾ ಆಸ್ತಿಯನ್ನು ಕಳೆದುಕೊಂಡ ಒಬ್ಬ ಬ್ಯಾಂಕ್ ನೌಕರ ಮತ್ತೆ, ದುಡ್ಡು ಮಾಡಲು ಹಣವಂತ ವಿಧವೆಯರನ್ನು ಮದುವೆಯಾಗಿ ಅವರನ್ನು ವಂಚಿಸಿ ಅವರ ಹಣವನ್ನು ಲಪಟಾಯಿಸಿ ಅವರನ್ನು ತೊರೆದು ಬೇರೆ ಹಣವಂತ ವಿಧವೆಯನ್ನು ಮದುವೆಯಾಗುವುದು. ಈತ ಅಂಥವರನ್ನು ಕೊಲೆ ಮಾಡಲೂ ಹೇಸುವುದಿಲ್ಲ. ಕೊನೆಗೆ ಸಿಕ್ಕಿಹಾಕಿಕೊಂಡು ಗಲ್ಲಿಗೆ ಏರುವ ಸಂದರ್ಭದಲ್ಲಿ ಅವನು ಹೇಳಿದ ತತ್ವ ಸರ್ವಮಾನ್ಯ ''ಒಬ್ಬರನ್ನು ಕೊಲೆ ಮಾಡಿದರೆ ಅವನು ಕೊಲೆಗಾರ, ಹತ್ತಾರು ಲಕ್ಷ ಜನರನ್ನು ಕೊಂದರೆ ಅವನು ಒಬ್ಬ ಹೀರೋ. ಸ್ನೇಹಿತನೇ ಕೇಳು: ಹೆಚ್ಚು ಹೆಚ್ಚು ಕೊಲೆ ಮಾಡಿದರೆ ಪಾಪ ತಟ್ಟುವುದಿಲ್ಲ.''

ಚಾರ್ಲಿಯ ಕೊನೆಯ ಸಿನೆಮಾಗಳು ಲೈಂಲೈಟ್ ಮತ್ತು ಕಿಂಗ್ ಇನ್ ನ್ಯೂಯಾರ್ಕ್, ಲೈಂಲೈಟ್ ಅಲ್ಲಿ ಅವನು ತನ್ನ ಬಾಲ್ಯದ ನಾಟಕ ರಂಗವನ್ನು ಮರು ಚಿತ್ರಿಸಿದ್ದಾನೆ. ಇದರಲ್ಲಿ ಒಬ್ಬ ಹಿರಿಯ ಹಾಸ್ಯ ನಟ ಆಲ್ವೆರೊ ಪಾತ್ರವನ್ನು ಚಾರ್ಲಿ ಮಾಡಿದ್ದಾನೆ. ಒಬ್ಬ ಯುವ ನಟಿ ಪಾರ್ಶ್ವ ವಾಯುವಿನಿಂದ ನರಳಿ ಆತ್ಮಹತ್ಯೆ ಮಾಡಿಕೊಳ್ಳಲು ಪ್ರಯತ್ನಿಸಿದಾಗ ಚಾರ್ಲಿ ಅವಳನ್ನು ರಕ್ಷಿಸಿ, ಅವಳಿಗೆ ಮತ್ತೆ ಗುಣವಾಗುವಂತೆ ಪ್ರೋತ್ಸಾಹಿಸಿ ಅವಳು ಒಬ್ಬ ದೊಡ್ಡ ನಟಿಯಾಗುವಂತೆ ಮಾಡಿದ. ನಂತರ ಅವಳು ಇನ್ನೊಬ್ಬ ಯುವ ನಟನೊಡನೆ ಅನುರಕ್ತಳಾದಾಗ, ಇವನು ಏನನ್ನೋ ಕಳೆದುಕೊಂಡಂತೆ ನಟಿಸಿರುವುದನ್ನು ನೋಡಿ ಸವಿಯಬೇಕೇ ಹೊರತು ಬರೀ ಮಾತಿನಿಂದ ಹೇಳಲಾಗುವುದಿಲ್ಲ.

87ರ ವಯಸ್ಸಿನಲ್ಲಿ ಅವನಿಗೆ ಎಲ್ಲ ತರದ ಅಭಿನಂದನೆಗಳ ಸುರಿಮಳೆಯಾಯಿತು. ಆಸ್ಕರ್ ಲಭಿಸಿತು. ಬ್ರಿಟಿಷ್ ರಾಣಿ ಚಾರ್ಲಿಗೆ ನೈಟ್ ಹುಡ್ ಪದವಿ ದಯಪಾಲಿಸಿದಳು. 20ನೇ ಶತಮಾನದ ಶ್ರೇಷ್ಠ ನಟನೆಂಬ ಬಿರುದು ಲಭಿಸಿತು.

ಚಾರ್ಲಿಯ ಹುಟ್ಟಿನ ಕಷ್ಟ ಕಾರ್ಪಣ್ಯಗಳೆಲ್ಲ ಅವನ ಅವಸಾನ ಕಾಲದಲ್ಲಿ ಮರೆತು ಹೋದವು. ಅವನ ಹಾಸ್ಯ ಚಿರಾಯುವಾಯಿತು.

# ಸ್ವಾಗತ - ವಿದಾಯ

- ಬಾಗೂರು ಚಂದ್ರು

ಮೂವತ್ತು ವರ್ಷಕ್ಕೂ ಹಿಂದಿನ ಮಾತು. ಯು.ಪಿ.ಎಸ್.ಸಿ. ಆಯ್ಕೆ, ಬೆಂಗಳೂರಿನಲ್ಲೇ ಪೋಸ್ಟಿಂಗ್, ಬರೀ ಬಿಳಿಕಾಲರ್ ಅಲ್ಲ ಥಳ ಥಳ ಹೊಳೆಯುವ ಬಿಳಿ - ಕ್ಲಾಸ್ ಒನ್ ಗೆಜೆಟೆಡ್ ಕೆಲಸಕ್ಕೆ ಸೇರಲು ಬೆಂಗಳೂರು ಆಕಾಶವಾಣಿಗೆ ಸೇರಲು ಹೋದ ದಿನ. ಇಂದು ಬಿ.ಇ. ಮುಗಿಸಿದ ಕೂಡಲೆ ಕೆಲಸಕ್ಕೆ ಸೇರಿದವರಿಗೆ ಸಿಗುವ ಸಂಬಳ, ಅಂದು (ಹಾಗೂ ಇಂದು ಸಹ) ಶೇಕದಾರರಿಗಿದ್ದ ಅಧಿಕಾರಕ್ಕೆ ಹೋಲಿಸಿದರೆ ನನ್ನ ಆ ಕೆಲಸ ಏನೂ ಅಲ್ಲ, ಆದರೆ ಬಾಗೂರೇ ಬ್ರಹ್ಮಾಂಡವಾಗಿದ್ದ ನಮ್ಮಗಳಿಗೆ ಆಗ ಇದು ಅತಿ ಭಾರಿ ಎನ್ನಿಸಿದ್ದು ಸಹಜ.

ಸಿಬ್ಬಂದಿ ವಿಭಾಗದ ಸಿದ್ದಪ್ಪನವರು ತಮ್ಮ ದಪ್ಪಗಾಜಿನ ಕನ್ನಡಕದ ಮೂಲಕ ಸುಮಾರು ಒಂದು ಗಂಟೆ ನಾನು ತೆಗೆದುಕೊಂಡು ಹೋಗಿದ್ದ ದಾಖಲಾತಿಗಳನ್ನು ತಿರುಗಾ-ಮುರುಗಾ, ಮೇಲಿನಿಂದ ಕೆಳಕ್ಕೆ, ಬಲದಿಂದ ಎಡಕ್ಕೆ ಎಲ್ಲಾ ರೀತಿಯಲ್ಲೂ ಪರಿಶೀಲಿಸಿದ ಮೇಲೆ ಸರಿ ಈ ಡ್ಯೂಟಿ ರಿಪೋರ್ಟ್ ರುಜುಮಾಡಿ ಎಂದು ಕಾಗದ ಕೊಟ್ಟರು. ನಾನು ರುಜು ಹಾಕುತ್ತಿದ್ದ ಹಾಗೆಯೇ ಸಿದ್ದಪ್ಪನವರು ಮೊದಲು, ವಿಭಾಗದ ಇನ್ನು ಹದಿನೈದು ಇಪ್ಪತ್ತು ಜನ ಅವರ ಹಿಂದೆ ದಡಕ್ಕನೆ ಎದ್ದು ನಿಂತು ಎರಡು ನಿಮಿಷ ಮೌನ ಆಚರಿಸಿದರು. ಎಲ್ಲರೂ ಕುಳಿತ ಮೇಲೆ ಅಲ್ಲಿದ್ದವರಲ್ಲಿ ಒಬ್ಬರು - ಹೀ ಹೀ ನೀವು ಕೆಲಸಕ್ಕೆ ಸೇರಿದ ಕ್ಷಣವೇ ಮೌರ್ನಿಂಗ್ ಎಂದು ಹಲ್ಲು ಕಿರಿದರು.

ದಂತಚೋರ, ಕಾಡುಗಳ್ಳ, ನರಹಂತಕ ಇತ್ಯಾದಿ ಇತ್ಯಾದಿ ಬಿರುದಾಂಕಿತನಾದ ವೀರಪ್ಪನ್ ಮುಂದೆಂದಾದರೂ ಲೋಕಸಭೆಯ ಸದಸ್ಯನಾಗಿ ಅಥವಾ ಮಂತ್ರಿಯೇ ಆಗಿ ಪ್ರಮಾಣವಚನ ಸ್ವೀಕರಿಸಿದರೆ, ಶಕೀಲ್ ಆಹಮದ್ ತಂದೆ ಕರೀಂ ಅಹಮದ್ ಜೊತೆಗೆ ನಮ್ಮಂತಹವರೂ ಎರಡು ನಿಮಿಷ ಮೌನ ಆಚರಿಸಬಹುದು, ಆದರೆ ನಾನು - ಅನಾಮಿಕ ಭಾರತೀಯ ಆಕಾಶವಾಣಿಯ ಅಧಿಕಾರಿಯಾದಷ್ಟಕ್ಕೆ ಇಲ್ಲಿರುವವರೆಲ್ಲಾ ವ್ಯಸನಿಸುವಂತಾಯಿತೆ ಎಂದು ತಕ್ಷಣ ದಿಗ್ಭ್ರಮೆಯಾಯಿತು.

ಮುಂದೆ ಗೊತ್ತಾಯಿತು - ಶೋಕ ಆಚರಿಸಿದವರು ಬರೀ ಆಕಾಶವಾಣಿಯವರಲ್ಲ ಇಡೀ ಭಾರತ ವಾಸಿಗಳು. ಆ ದಿನ ಜನವರಿ 30 ಹುತಾತ್ಮರಿಗೆ ಶ್ರದ್ಧಾಂಜಲಿ ತೋರಿಸುವ ಆಚರಣೆ ಹೊಸದಾಗಿ ಷುರುವಾಗಿತ್ತು -

ಸಾಕಷ್ಟು ಜನ ಇದರಲ್ಲಿ ಭಾಗಗಿಗಳಾಗುತ್ತಿದ್ದರು. ಆ ಕೊಠಡಿಯಲ್ಲಿ ಮಾಡಿದ್ದ ನಗೆಪಾಟಿಕೆ ಬೇರೆಯವರಿಗೂ ತಿಳಿಯಿತು. ನನಗೆ ಹೊಸದಾಗಿ ಪರಿಚಯವಾದವರಲ್ಲಿ ಹಲವರು ಅದೇ ಮೌರ್ನಿಂಗ್‌ನವರೋ ನೀವು ಎಂದು ನನ್ನನ್ನು ಮೊದಲು ಗುರುತಿಸಲು ಪ್ರಾರಂಭಿಸಿದರು.

ಸಿದ್ದಪ್ಪನವರು ಕೊಟ್ಟ ಕಾಗದದ ಮೇಲೆ ರುಜು ಹಾಕುವುದು ಸರ್ಕಾರಿ ಕೆಲಸಕ್ಕೆ ಸೇರುವ ವಿಧಿಯಲ್ಲಿ ಮೊದಲ ಹೆಜ್ಜೆ. ಈ ಸಹಿ ಇವರದೇ ಎಂದು ದೃಢೀಕರಿಸಬೇಕಾಗಿದ್ದವರು ಚಿಕ್ಕ ಸಾಹೇಬರು - ಎ.ಎಸ್.ಡಿ. ಮಹಾಶಯರು. ಈ ಮೂರು ಅಕ್ಷರಗಳ ಅರ್ಥ ಆಗ ನನಗಿರಲಿಲ್ಲ - ಅದಕ್ಕೂ ಒಂದು ಇತಿಹಾಸವಿತ್ತು. ಮೈಸೂರು ಆಕಾಶವಾಣಿಯಲ್ಲಿ ನಾ.ಕಸ್ತೂರಿ ಇದ್ದದ್ದು ಇದೇ ಹುದ್ದೆಯಲ್ಲಿ. ಆಗ ಜಾಗದಲ್ಲಿ ಎಸ್ ಇತ್ತು. ಕೆಳಗಿನವರಿಂದ ಮೇಲಿನವರಿಗೆ ASS-ಕತ್ತೆ ಎಂದು ಕರಸಿಕೊಳ್ಳಬೇಕಾಗಿದ್ದ ತಮ್ಮ ಅವಸ್ಥೆಯನ್ನು ಅವರೇ ತಿಳಿಸಿದ್ದಾರೆ. ಆ ದಿನ ಎ.ಎಸ್.ಡಿ. - ಮೌನಾಚರಣೆಯಲ್ಲಿ ಭಾಗವಹಿಸಲು ಇಷ್ಟವಿಲ್ಲವಾದ್ದರಿಂದಲೋ ಅಥವಾ ಬೇರೆ ಕಾರಣಕ್ಕೂ ಮಧ್ಯಾಹ್ನದವರೆಗೂ ಬರುವುದಿಲ್ಲ ಎನ್ನುವ ಸಂದೇಶ ಕಳುಹಿಸಿದ್ದರು. ಅವರು ಬರುವವರೆಗೂ ಈರಣ್ಣನ ಮುಂದಿನ ಬಸವಣ್ಣನಂತೆ ಕುಳಿತಿದ್ದ ನನ್ನನ್ನು ಏನು ಮಾಡಬೇಕು ಎನ್ನುವುದು ಸಿದ್ದಪ್ಪನವರ ಸಮಸ್ಯೆ. ಬೇರೆ ಊರಿನಿಂದ ಬಂದಿದ್ದೀರಿ. ವಿಧಾನಸೌಧ ಕಬ್ಬನ್‌ಪಾರ್ಕ್ ಒಂದು ಸುತ್ತಿ ಹಾಕಿಕೊಂಡು ಬನ್ನಿ ಎಂದು ಸಿದ್ದಪ್ಪ ಹೇಳಿದರು. ಅವುಗಳನ್ನು ನೋಡಬೇಕು ಎನ್ನುವ ಆಸೆಯೇನೋ ಇತ್ತು. ಆದರೆ ಅದನ್ನು ಸರ್ಕಾರದ ವೇಳೆಯಲ್ಲಿ ಅದೂ ಮೊದಲ ದಿನವೇ ಮಾಡಬೇಕೇ ಎನ್ನುವ ಸಂಕೋಚ.

ಮಧಾಹ್ನ ನನ್ನನ್ನು ಎ.ಎಸ್.ಡಿ. ಹಿರೇಮಠರ ಮುಂದೆ ಹಾಜರ್‌ಪಡಿಸಲಾಯಿತು. ಹಿರೇಮಠ ಇಪ್ಪತ್ತು ವರ್ಷ ಪುಟ್ಟ ಸಾಹೇಬರಾಗಿದ್ದವರು ಈಗ ಎರಡು ವರ್ಷದ ಹಿಂದೆ ನಂಬರ್ ಟೂ-ಚಿಕ್ಕ ಸಾಹೇಬರ ಹುದ್ದೆಗೆ ಭಡ್ತಿ ಹೊಂದಿದವರು ಸಾಹೇಬರಿಗೆ ತಕ್ಕಂತಹ ದೇಹ. ಚಳಿಗಾಲ ಮುಗಿದಿದ್ದರೂ ಪೂರ್ಣಸೂಟ್. ಅಧಿಕಾರಕ್ಕೆ ಸರಿಯಾದ ಅಥವಾ ಚೂರು ಹೆಚ್ಚಾದ ದರ್ಪ. ನನ್ನನ್ನು ನೋಡಿದ ಕೂಡಲೇ ಅವರಿಗೆ ತುಂಬಾ ಕೋಪ ಬಂದಿರಬೇಕು. ಊರಿನಿಂದ ತಂದ ಪೆಟ್ಟಿಗೆಯಲ್ಲಿ ತುರುಕಿದ್ದರಿಂದ ಸುಕ್ಕಾದ ಅಂಗಿ ಪ್ಯಾಂಟ್, ಉಂಗುಷ್ಟ ಹರಿದ ಚಪ್ಪಲಿ ನಾನು ಹೊರಟಾಗ ಚಪ್ಪಲಿ ಹರಿದಿರಲಿಲ್ಲ ಬೆಂಗಳೂರು ಬಸ್‌ಗಳಲ್ಲಿನ ಪೀಕ್ ಅವರ್ ಅನುಭವ ಹೊಸತು, ಇನ್ನು ಯಾರದೋ ಬೂಟುಕಾಲಿನ ಕೆಳಗೆ ನನ್ನ ಚಪ್ಪಲಿ ಸಿಕ್ಕಿಹಾಕಿಕೊಳ್ಳುವಂತೆ

ಮಾಡಿಸಿತ್ತು. ಹಿರೇಮಠರಿಗೆ ಚಹಾ ತಂದುಕೊಟ್ಟ ಕ್ಯಾಂಟೀನ್‌ಬಾಯ್ ನನಗಿಂತ ಉತ್ತಮ ಬಟ್ಟೆ ಧರಿಸಿದ್ದ. ಜೊತೆಗೆ ಹೊಸ ಹುದ್ದೆ ಏನೋ ಹೇಗೋ ಕಾತುರ ನಾನು ಬೆಂಗಳೂರಿಗೆ ಮೊದಲ ಬಾರಿಗೆ ಬಂದ ಬೋರೇಗೌಡನಂತೆ ಅವರಿಗೆ ಕಾಣಿಸಿರಬೇಕು. ಇಂತಹವನೂ ನಮ್ಮಂತಹ ದೊಡ್ಡ ಆಫೀಸರ್‌ಗಳ ದರ್ಜೆಗೆ ಬಂದನೇ ಎನ್ನುವುದು ಅವರ ಕೋಪದ ಮುಖ್ಯ ಕಾರಣ.

ಹಿರೇಮಠರು ಏನಿದ್ದರೂ ನಂಬರ್ ಟೂ. ನಂಬರ್ ಒನ್ ಡೈರೆಕ್ಟರ್ ಮುಂದೆ ನಾನು ಸಂವಿಧಾನಕ್ಕೆ ನಿಷ್ಠೆ ತಿಳಿಸುವ ಪ್ರಮಾಣ ತೆಗೆದುಕೊಳ್ಳಬೇಕು. ಸಿದ್ದಪ್ಪನವರೊಂದಿಗೆ ಡೈರೆಕ್ಟರ್ ದೀಕ್ಷಿತರ ಕಚೇರಿಗೆ ಮುಂದಿನ ಪ್ರಯಾಣ. ಅವರಿಗೆ ಕೊಂಚ ದೃಷ್ಟಿದೋಷ, ಉತ್ತರ ಬೈ ಉತ್ತರ ಪೂರ್ವ ಇಪ್ಪತ್ತು ಡಿಗ್ರಿ ನೋಡುತ್ತಿದ್ದಾರೆ ಎಂದು ಅವರ ಎದುರಿಗೆ ಕುಳಿತವರಿಗೆ ಭಾಸವಾಗುತ್ತಿದ್ದರೆ ಅವರು ನಿಜವಾಗಿಯೂ ನೋಡುತ್ತಿರುತ್ತಿದ್ದುದು ಉತ್ತರ ಬೈ ಉತ್ತರ ಪಶ್ಚಿಮ ಮೂವತ್ತು ಡಿಗ್ರಿ. ಸಿದ್ದಪ್ಪನವರಿಗೆ ಏನೋ ಹೇಳುತ್ತಿದ್ದಾರೆ ಎಂದು ನಾನು ತಿಳಿದಿದ್ದರೆ ವಾಸ್ತವವಾಗಿ ಅವರು ಉದ್ದೇಶಿಸಿದ್ದು ನನ್ನನ್ನು, ಅವರ ಮಾತಿನ ಸಾರಾಂಶ: ನಿನ್ನ ಕೆಲಸ ಆಜ್ಞೆಯ ಕಾಪಿ ನನಗೆ ದೆಹಲಿಯಿಂದ ಬಂದ ದಿನವೇ ನಮಗೆ ಇವನು ಬೇಕಾಗಿಲ್ಲ ಇನ್ನೆಲ್ಲಿಗಾದರೂ ಕಳಹಿಸಿ ಎಂದು ಬರೆದಿದ್ದೆ. ನಮಗೆ ತುರ್ತಾಗಿ ಇಬ್ಬರು ಗುಮಾಸ್ತರು ಇಬ್ಬರು ಪ್ಯೂನ್ ಬೇಕಾಗಿದ್ದಾರೆ. ಆದರೆ ಆ ಹುದ್ದೆ ತುಂಬಬೇಡಿ ಎಕಾನಮಿ ಎಂದು ದೆಹಲಿಯವರು ಹೇಳುತ್ತಾರೆ. ಆದರೆ ನಿನ್ನಂತಹ ನಮಗೆ ಉಪಯೋಗಕ್ಕೆ ಬರದ ಹುದ್ದೆಗೆ ಜನ ಕಳುಹಿಸುತ್ತಾರೆ. ನನ್ನ ಕಾಗದಕ್ಕೆ ದೆಹಲಿಯಿಂದ ಇನ್ನೂ ಉತ್ತರ ಬಂದಿಲ್ಲ. ನೀನು ಅವಸರ ಪಟ್ಟುಕೊಂಡು ಬಂದುಬಿಟ್ಟಿದ್ದೀಯಾ. ಸಾರಾಂಶ ಇದಾದರೂ ಭಾಷಣ ಮುಗಿಯುವ ಹೊತ್ತಿಗೆ ಅರ್ಧಗಂಟೆ ಮೀರಿತ್ತು.

ಅಂದು ಸರಕಾರದಲ್ಲಿದ್ದ ಎಕಾನಮಿ, ಖರ್ಚು ಕಡಿಮೆ ಮಾಡಿ ಎನ್ನುವ ಕೂಗು ನಿವೃತ್ತನಾದ ದಿನವೂ ಇತ್ತು. ಆದರೆ ಈ ಅವಧಿಯಲ್ಲಿ ಐದುಸಾವಿರ ಜನರಿದ್ದ ಸಂಸ್ಥೆ ನಾಲ್ವತ್ತೈದು ಸಾವಿರ ಜನರ ಜಂಬೋ ಇಲಾಖೆಯಾಗಿ ಬೆಳೆದಿತ್ತು. ಸಾಕಷ್ಟು ಅನುಭವವಿದ್ದ ದೀಕ್ಷಿತರಿಗೆ ಅದು ತಿಳಿದಿದ್ದಿರಬಹುದು. ದೆಹಲಿಯ ಆಜ್ಞೆಯನ್ನು ಪರಿಪಾಲಿಸಬೇಕಾದ ಅನಿವಾರ್ಯದಿಂದ ಸರಿ ಇವನಿಗೆ ಎಲ್ಲಾದರೂ ಕುಳಿತುಕೊಳ್ಳಲು ಜಾಗ ಹುಡುಕಲು ಹಿರೇಮಠರಿಗೆ ಹೇಳಿ ಎಂದು ತಮ್ಮ ಜವಾಬ್ದಾರಿಯಿಂದ ಕೈ ತೊಳೆದುಕೊಂಡರು.

ಇದು ಮೊದಲ ಅಂಕ ಮಾತ್ರ. ನನಗೆ ನೇರವಾಗಿ ಕೆಲಸ ಕೊಡಬೇಕಾದವರು ನಾನು ಮಾಡಿದ್ದು ಸರಿಯೇ ತಪ್ಪೇ ಎಂದು

ಹೇಳಬೇಕಾಗಿದ್ದವರು ದೆಹಲಿಯಲ್ಲಿದ್ದ ನಮ್ಮ ವಿಭಾಗದ ಮುಖ್ಯಸ್ಥರು. ಕೆಲಸಕ್ಕೆ ಸೇರಿದ ಕೂಡಲೇ ನಿಮ್ಮ ಅಪ್ಪಣೆಗಾಗಿ ಕಾಯುತ್ತಿದ್ದೇನೆ ಎಂದು ಬರೆದದ್ದಾಯಿತು. ತಿಂಗಳು, ಎರಡು ತಿಂಗಳು ಉತ್ತರವಿಲ್ಲ. ಮುಂದೆ ಮೂರು ತಿಂಗಳಾದ ಮೇಲೆ ಮೊದಲ ಅಸೈನ್‌ಮೆಂಟ್ ಇಂತಿಂತಹ ಕಡೆ ಇಷ್ಟಿಷ್ಟು ಜನರಿಂದ ಈ ತರಹದ ಈ ಮಾಹಿತಿಯನ್ನು ಗ್ರಹಿಸಿ ಅದನ್ನು ವಿಶ್ಲೇಷಿಸಿ ಒಂದು ವಿವರವಾದ ವರದಿಯನ್ನು ಇಂತಹ ತಾರೀಕು ಇಷ್ಟು ಗಂಟೆಗೆ ಮುಂಚೆ ತಲುಪುವಂತೆ ಕಳುಹಿಸತಕ್ಕದ್ದು ಎನ್ನುವ ಸನ್ನದು.

ಅಗಸ ಹೊಸ ಗಿರಾಕಿಯ ಬಟ್ಟೆಯನ್ನು ಎತ್ತಿ ಎತ್ತಿ ಒಗೆದ ಎಂದು ಹಳೆಗಾದೆ ಹೇಳುತ್ತದೆ. ಇಲ್ಲಿ ಅಗಸನೇ ಹೊಸಬ, ಮತ್ತೆ ಮತ್ತೆ ಸೋಪ್‌ಹಾಕಿ ಮತ್ತೆ ಮತ್ತೆ ಒಗೆಯುವ ಹುಮ್ಮಸ್ಸು ನಿಗದಿ ಪಡಿಸಿದ ದಿನಕ್ಕೆ ಮುಂಚೆಯೇ ಅರವತ್ತು ಪುಟಗಳ ವರದಿ ಕಳುಹಿಸಿದೆ. ನನ್ನ ಈ ಮಹತ್ಕೃತಿಯನ್ನು ಎಲ್ಲರೂ ಕೊಂಡಾಡುತ್ತಾರೆ ಎನ್ನುವ ನಿರೀಕ್ಷೆ, ಏನಾದರೂ ಐಬು ಕಂಡು ಬರುತ್ತದೆಯೋ ಎನ್ನುವ ಭಯ ಆತಂಕ. ಒಂಬತ್ತು ತಿಂಗಳ ದೀರ್ಘ ಮೌನ. ಆಮೇಲೆ ನಮ್ಮ ಇಂತಹ ದಿನದ ಈ ನಂಬರ್ ಪತ್ರದಲ್ಲಿ ನಿನಗೆ ಒಂದು ವರದಿ ಬರೆದು ಕಳುಹಿಸು ಎಂದು ಕೇಳಿದ್ದೆವು, ನಿನ್ನಿಂದ ಉತ್ತರವಿಲ್ಲ ಇನ್ನು ಒಂದು ತಿಂಗಳಲ್ಲಿ ಈ ವರದಿ ನಮಗೆ ಬರದಿದ್ದರೆ ನೀನು ಮುಂದೆ ಪರಿತಪಿಸಬೇಕಾಗುತ್ತದೆ ಎನ್ನುವ ಎಚ್ಚರಿಕೆಯ ಪತ್ರ.

ಪರಿಸ್ಥಿತಿ ಹೀಗೇ ಉಳಿಯಲಿಲ್ಲ. ಪಾರ್ಕಿನ್‌ಸನ್ ಮಹಾಶಯನ ಮೊದಲ ನಿಯಮದಂತೆ ಕೆಲಸ ಬೆಳೆಯಿತು. ದೀಕ್ಷಿತರು ವರ್ಗವಾಗಿ ಅವರ ಜಾಗಕ್ಕೆ ಬಂದವರು ನಾನು ಎರಡು ವಾರ ರಜ ಕೇಳಿದರೆ, ಸಾಧ್ಯವಿಲ್ಲ ಒಂದೇ ವಾರಕ್ಕೆ ವಾಪಸ್ ಬಾ ಎನ್ನುವಂತಾಯಿತು. ನಾನು ಆಗಿದ್ದ ಜಾಗದಲ್ಲಿದ್ದವರು ಈಗ ಎರಡುವಾರ ರಜ ಕೇಳಿದರೆ ಎರಡು ದಿನ ಸಾಲದೆ ಎಂದು ಕೇಳುವಂತಾಗಿದೆಯೆಂತೆ.

ಸಕಾರದಲ್ಲಿ ಕೆಲಸಕ್ಕೆ ಸೇರಿದ ದಿನವೇ ನಿವೃತ್ತಿಯ ದಿನವೂ ತಿಳಿದಿರುತ್ತದೆ. ವರ್ಷಗಳು ದಶಕಗಳಾಗಿ ಮುಂದಿನ ವರ್ಷ ವಿದಾಯ ಎನ್ನುತ್ತಿರುವಾಗಲೇ ಸರಕಾರ ಕೊಟ್ಟಿದ್ದ ಮನೆಯ ಧೂಳು ಹೊಡೆಯುವುದನ್ನು ನಿಲ್ಲಿಸಿದೆವು. ಮುಂದಿನ ತಿಂಗಳು ಎನ್ನುವಾಗ ಗಂಟು ಕಟ್ಟಲು ಪ್ರಾರಂಭಿಸಿದೆವು. ಇನ್ನು ಮೂರುವಾರ, ಹತ್ತೇ ದಿನ ಎಂದು ಎಣಿಸುತ್ತಿದ್ದಾಗ ಖುದ್ದು ಪ್ರಧಾನಮಂತ್ರಿಗಳು ಹಾಗೂ ಅವರ ಸಚಿವಸಂಪುಟದ ಸದಸ್ಯರು, ನೀವು ಮನೆಗೆ ಹೋದರೆ ನಮ್ಮ ಗತಿಯೇನು ಖಂಡಿತಾ ಇನ್ನು ಎರಡು ವರ್ಷ ಇಲ್ಲೇ ಇರಿ ಎಂದು ಕೇಳಿದರು. ದೊಡ್ಡವರ ಮಾತು ಕೇಳಲೇಬೇಕಲ್ಲ, ಕಟ್ಟಿದ್ದ ಗಂಟುಗಳನ್ನು ಬಿಚ್ಚಬೇಕಾಯಿತು.

ಕುಹಕಿಗಳು ನಿವೃತ್ತಿಯ ವಯಸ್ಸು ಅರವತ್ತಾಗಿದ್ದು ನಿನಗೊಬ್ಬನಿಗೆ ಅಲ್ಲ. ಕನ್ನಡದ ಪಲ್ಲು ಮಂಜು ಹಿಂದಿಯ ಲಲ್ಲು ಪಂಜು ಎಲ್ಲರಿಗೂ ಇದು ಅನ್ವಯವಾಯಿತು ಎಂದು ಹೇಳಬಹುದೇನೋ ನನ್ನ ಉತ್ತರ - ಜನವರಿ ಮೂವತ್ತರ ಶೋಕಾಚರಣೆ ನಾನು ಕೆಲಸಕ್ಕೆ ಸೇರಿದ್ದಕ್ಕಾಗಿದ್ದರೆ ಈ ನಿರ್ಧಾರ ನನಗೋಸ್ಕರ ಅಲ್ಲ ಎಂದು ಹೇಗೆ ಹೇಳುತ್ತೀರಿ? ಪಲ್ಲು ಮಂಜುಗಳಿಗೂ ಅನುಕೂಲವಾಗಿದ್ದರೆ ತುಂಬಾ ಸಂತೋಷ.

ಈ ಎರಡು ವರ್ಷಗಳೂ ಮುಗಿಯುವುದಕ್ಕೆ ಬಂತು. ಗೊತ್ತಿರುವ ಡೆವಿಲ್ ಇನ್ನೂ ಕಂಡಿಲ್ಲದ ಏಂಜಲ್‌ಗಿಂತ ಉತ್ತಮ ಎನ್ನುವ ಕಾರಣಕ್ಕೂ ಏನೋ ಇನ್ನು ಎರಡು ವರ್ಷ, ಹೋಗಲಿ ಒಂದು ವರ್ಷ ಅಟ್‌ಲೀಸ್ಟ್ ಆರು ತಿಂಗಳು ಇದ್ದುಹೋಗಿ ಎಂದು ಇಲಾಖೆಯ ದೊಡ್ಡವರೇ ಕೇಳಿದರು. ನಾನೇ ಬೇಡವೆಂದೆ. ದೀಕ್ಷಿತರ ಸ್ವಾಗತ ಭಾಷಣ ಹೇಳಿದ್ದರಿಂದ ಈ ವಂದನಾವರ್ಪಣೆಯನ್ನು ಹೇಳಬೇಕಾಯಿತು.

ಮೊದಲ ದಿನದಂತೆ ಕಡೆಯ ದಿನವೂ ಏನೂ ಮಾಡುವುದಿಲ್ಲ, ಹತ್ತಿರದ ಪಾರ್ಕ್ ಸುತ್ತಿಕೊಂಡು ಬರುತ್ತೇನೆ ಎಂದುಕೊಂಡಿದ್ದೆ. ಆಗಲಿಲ್ಲ ಬೆಳಗಿನಿಂದ ಒಬ್ಬರಾದ ಮೇಲೆ ಒಬ್ಬರಂತೆ ಸಹೋದ್ಯೋಗಿಗಳ ಸಾಲು. ಬಾಯಿತುಂಬಾ ಹೊಗಳಿಕೆ, ನೀವು ಹೋದ ಮೇಲೆ ಏನುಗತಿ ಎನ್ನುವ ಕಳವಳ. ಬಾಯಿಮಾತನ್ನಾಡುತ್ತಿದ್ದರೂ ಕಣ್ಣು ಇನ್ನು ಎಲ್ಲೋ ಇದೆ ಎನ್ನುವ ಅನುಮಾನವಿತ್ತು. ಆಮೇಲೆ ಗೊತ್ತಾಯಿತು ಅವರುಗಳು ಬಂದಿದ್ದು ನಾನು ಕುಳಿತಿದ್ದ ಕುರ್ಚಿ, ಎದುರಿಗಿದ್ದ ಮೇಜು, ಅದರ ಮೇಲಿದ್ದ ಗಾಜು, ಅದರ ಮೇಲಿನ ಡಸ್ಕ್ ಕ್ಯಾಲೆಂಡರ್, ಪೇಪರ್‌ವೈಟ್, ಆ ಕಡೆಯಿದ್ದ ಕಂಪ್ಯೂಟರ್, ಇನ್ನೊಂದು ಕಡೆಯಿದ್ದ ಫ್ಯಾಕ್ಸ್‌ಮೆಷಿನ್, ಹೊರಗೆ ಕುಳಿತಿದ್ದ ಸೆಕ್ರಟರಿ ಅಜಮಾಯಿಷಿ ಮಾಡಲು ಮಾರನೆಯದಿನ ಅವರುಗಳ ನಡುವೆ ಇವುಗಳನ್ನು ಪಡೆಯುವ ಬಗೆಗೆ ಹೋರಾಟ ನಡೆಯಿತಂತೆ.

ಸಿದ್ದಪ್ಪನವರ ಇಂದಿನ ಅವತಾರದ ವ್ಯಕ್ತಿಗೆ ಕೆಲಸ ಮುಗಿಸಿದ ಕಾಗದಕ್ಕೆ ರುಜು ಹಾಕಿಕೊಟ್ಟು ಕಛೇರಿಯನ್ನು ಬಿಡುವ ವೇಳೆಯೂ ಆಯಿತು. ಅಲ್ಲಿದ್ದ ಹತ್ತು ಹದಿನೈದು ಸಹೋದ್ಯೋಗಿಗಳಲ್ಲಿ ಕೆಲವರ ಕಣ್ಣಿನಲ್ಲಿ ನೀರು ಕಾಣಿಸಿತು. ಅಷ್ಟು ವರ್ಷ ಜೊತೆಗಿದ್ದ ಅಂತಃಕರಣ ಅದಕ್ಕೆ ಎಷ್ಟು ಕಾರಣ, ಹನ್ನೆರಡು ಗಂಟೆಗೆ ಬಂದು ನಾಲ್ಕು ಗಂಟೆಗೆ ಕಛೇರಿಯಿಂದ ಹೋದರೂ ಈ ಪ್ರಾಣಿ ಸುಮ್ಮನಿರುತ್ತಿತ್ತು, ಮುಂದೆ ಬರುವವನು ಎಂತಹವನೋ ಲೇಟ್ ಆಗಿ ಬಂದು ದಿವಸವಾದರೂ ಬೇಗ ಹೋಗಬೇಡಿ ಅಂತ ಏನಾದರೂ ಹೇಳುತ್ತಾನೇನೋ ಎನ್ನುವ ಭೀತಿ ಎಷ್ಟು ಕಾರಣ, ಗೊತ್ತಿಲ್ಲ.

# ಲಾಂಗೂಲಾ ಚಾರ್ಯರು!

**– ಹೆಚ್. ಗೋಪಾಲಕೃಷ್ಣ**

ಪಾ.ವೆಂ. ಅಥವಾ ಪಾಡಿಗಾರು ವೆಂಕಟರಮಣಾಚಾರ್ಯ ಅಥವಾ ಪಾ.ವೆಂ. ಆಚಾರ್ಯ ಎಂದರೆ ಆಗ - 60-70ರ ದಶಕದಲ್ಲಿ ನಮಗೆ ತಿಳಿಯದು ಬದಲಿಗೆ ಲಾಂಗೂಲಾಚಾರ್ಯ ಎಂಬ ಹೆಸರು ಕೇಳಿದರೆ ನಗೆ ಉಕ್ಕುತ್ತಿತ್ತು - ಕಸ್ತೂರಿ ಕರ್ಮವೀರಗಳಲ್ಲಿ ಲಾಂಗೂಚಾರ್ಯರ ಹಾಸ್ಯ ಆಗಲೇ ಮನೆಮಾತು. ಅಪ್ಪ-ಅಮ್ಮ ತಮ್ಮ ಪ್ರೀತಿಯ ಮಕ್ಕಳಿಗೆ ಇಂತಹ ಹೆಸರನ್ನೂ ಇಡುತ್ತಾರೆಯೇ ಎಂದು ನಾನು ಯೋಚಿಸಿದ್ದೂ ಸಹ ಉಂಟು. ಎಷ್ಟೋ ವರ್ಷಗಳ ನಂತರ ಲಾಂಗೂಲಾಚಾರ್ಯ ಅವರೇ ಪಾ.ವೆಂ. ಎಂದೂ ಪಾ.ವೆಂ. ಅವರೇ ಲಾಂಗೂಲಾಚಾರ್ಯ ಎಂಬ ಹೆಸರನ್ನು ತಮಗೆ ತಾವೇ ಇರಿಸಿಕೊಂಡಿದ್ದು ಎಂದೂ ತಿಳಿಯಿತು.

ಲಾಂಗೂಲಾಚಾರ್ಯ ಅವರನ್ನ ನೋಡದೇ ಇದ್ದರೂ ಅವರು ಆತ್ಮೀಯರಾಗಿದ್ದು ಅವರ ಬರಹಗಳ ಮೂಲಕ. ಕಸ್ತೂರಿ ಪತ್ರಿಕೆಗೆ ಅವರು ಖಾಯಂ ಆಗಿ ಬರೆಯುತ್ತಿದ್ದ ಲೇಖನಗಳು - 'ಕಸ್ತೂರಿ ಡೈಜೆಸ್ಟ್' ಎಂಬ ಹೆಸರು ಹೊತ್ತು 'ರೀಡರ್ಸ್ ಡೈಜೆಸ್ಟ್'ನ ಮಾದರಿಯಲ್ಲೇ ಎಲ್ಲ ವಯೋಮಾನದವರಿಗೂ ಹಿಡಿಸುವಂತಹದಾಗಿದ್ದು ಒಂದು ರೀತಿ ನಮಗೆ ಇಷ್ಟ ಆಗಿತ್ತು. ಕಸ್ತೂರಿ ಮನೆಗೆ ಬಂದ ಕೂಡಲೇ ಮೊದಲು 'ಇದುವೆ ಜೀವ ಇದು ಜೀವನ' ಓದಿ ನಂತರ ನಿಮ್ಮ ಶಬ್ಧ ಭಂಡಾರ ಬೆಳೆಯಲಿ ಅಂಕಣಗಳ ಹಾರುತ್ತಿದ್ದೆ. ಪ್ರತಿ ಪದಕ್ಕೆ ನಾಲ್ಕಾರು ಅರ್ಥಗಳು - ಅದನ್ನು ಆಯ್ಕೆಮಾಡಿ ಫಲತಿರುವಿದರೆ ಸರಿಪದದ ವಿವರವಾದ ಅರ್ಥ! ಅದರಲ್ಲೂ ಮೋಜು ಎಂದರೆ 6-8 ಉತ್ತರ ಸರಿ ಇದ್ದರೆ ಸುಮಾರು 8-10 ಸರಿ ಇದ್ದರೆ ಉತ್ತಮ 10ರ ಮೇಲೆ ಸರಿ ಇದ್ದರೆ ಅತ್ಯುತ್ತಮ ಎಂಬ ನೋಟ್ ಹಾಕಿರುತ್ತಿದ್ದರು. ಸರಿ ಉತ್ತರ ಮನಸ್ಸಿನಲ್ಲೇ ಗುರುತು ಹಾಕಿಕೊಂಡು ಹತ್ತರ ಮೇಲೆ ನನಗೆ ನಾನೇ ನಂಬರು ಕೊಟ್ಟುಕೊಂಡು 'ಮೇಧಾವಿ' ಎಂದು ಸುಮಾರು ಸಲ ಬೆನ್ನು ಚಪ್ಪರಿಸಿ ಕೊಂಡಿದ್ದೇನೆ! ಈ ಶಬ್ಧ ಭಂಡಾರದ ಲೇಖಕರು ಪಾ.ವೆ. ಯಾನೆ ಲಾಂಗೂಲಾಚಾರ್ಯ.

ಅಮೆರಿಕದ ರಾಯಭಾರಿ ಕಛೇರಿ ಅವರು ಆಗ 80ರ ದಶಕದಲ್ಲಿ ಒಂದು ಇಂಗ್ಲಿಷ್ ಮಾಸಿಕ Span ಹೆಸರಿನದ್ದು ಹೊರತರುತ್ತಿದ್ದರು. ಕೆಲವು ವಿಶೇಷ ಲೇಖನಗಳು ಅದರಲ್ಲಿ ಅಡಕವಾಗಿರುತ್ತಿತ್ತು. ಒಂದು ಸಂಚಿಕೆಯಲ್ಲಿ Micro Machines ಎಂಬ ಲೇಖನ ಪ್ರಕಟವಾಗಿತ್ತು, ಸೂಜಿ ಮೊನೆಯ ಮೇಲೆ ಇಡಬಹುದಾದ ಸುಮಾರು ಇನ್ನೂರರಷ್ಟು ರೋಬಾಟ್‌ಗಳನ್ನು ನಿರ್ಮಿಸಿ ಅದನ್ನು ವೈಜ್ಞಾನಿಕವಾಗಿ ಬಳಸಬಹುದಾದ ತಂತ್ರಜ್ಞಾನ ಕೆಲವೇ ವರ್ಷಗಳಲ್ಲಿ ಅಭಿವೃದ್ಧಿಯಾಗಲಿದೆ. ಇಂತಹ ಸೂಕ್ಷ್ಮ ರೋಬೋಟುಗಳನ್ನು ಹೃದಯದ ನಾಳಗಳಲ್ಲಿ ಶೇಖರಿತವಾಗಿರುವ ಕೊಬ್ಬನ್ನು ಕೊಯ್ದು ಹೊರಹಾಕಲು ಸೂಕ್ತ ನಿರ್ದೇಶನ ನೀಡಬಹುದು. ಮತ್ತು ಅದರ ಕೆಲಸ ಮುಗಿದ ನಂತರ ದೇಹದಿಂದ ಹೊರಕ್ಕೆ ಈ ರೋಬೋಟುಗಳನ್ನು ಬೆವರು, ಮೂತ್ರದ ಮೂಲಕ ರವಾನಿಸಬಹುದು. ಎಂದು ಲೇಖನ ವಿವರವಾಗಿ ವಿವರಿಸಿತ್ತು. ಇಂತಹ ಲೇಖನ ಕನ್ನಡದಲ್ಲಿ ಬಂದರೆ ಎಷ್ಟು ಚನ್ನ ಅನ್ನಿಸಿ ಅದರ ಭಾವಾನುವಾದ ಮಾಡಿ ಕಸ್ತೂರಿಗೆ ರವಾನಿಸಿದೆ, ಕಸ್ತೂರಿಯಲ್ಲಿ ಅದು ಪ್ರಕಟ ಸಹ ಆಯಿತು. ಒಂದುವಾರದಲ್ಲೇ ಪಾ.ವೆಂ. ಅವರಿಂದ ಒಂದು ಪತ್ರ ಬಂತು. 'ಲೇಖನ ಚೆನ್ನಾಗಿದೆ'. ಆಗಾಗ್ಗೆ ಇಂತಹ ಲೇಖನ ರವಾನಿಸಿ.'

ಪಾ.ವೆಂ. ಅವರಿಗೂ ವೈಜ್ಞಾನಿಕ ಲೇಖನ ಇಷ್ಟವಾಯಿತು ಎಂಬುದು ನನಗೆ ಒಂದು ತರದ ಕಳ್ಳು ಕುಡಿಸಿದ ಹಾಗೆ ಆಗಿತ್ತು, ಎಷ್ಟೋ ವರ್ಷಗಳ ನಂತರ ಪಾ.ವೆಂ. ಅವರು ವೈಜ್ಞಾನಿಕ ಲೇಖನಗಳ್ನು ರಾಧಾಕೃಷ್ಣ ಎಂಬ ಹೆಸರಿನಲ್ಲಿ ಕಸ್ತೂರಿಯಲ್ಲಿ ಬರೆದರು ಎಂದು ಓದಿದ ನೆನಪು. 'ರಾಧಾಕೃಷ್ಣ' ಪಾ.ವೆಂ. ಅವರ ಮತ್ತೊಂದು ರೂಪ. ಹತ್ತು ವರ್ಷದ ಹಿಂದೆ ನನ್ನ ಮೊದಲ ಕಥಾ ಸಂಕಲನ ವೈಶಾಖ. ಮಾಸ್ತಿ ಟ್ರಸ್ಟ್‌ನವರ ಆರ್ಥಿಕ ನೆರವಿನೊಂದಿಗೆ ಪ್ರಕಟವಾಯಿತು. ಈ ಸಂಕಲನಕ್ಕೆ ನೋಬಲ್ ಪ್ರಶಸ್ತಿ ಬಂದರೂ ಬರಬಹುದು ಎಂದು ಆಗಿನ ನನ್ನ ಕನಸು! 'ವೈಶಾಖ' ಸಂಕಲನವನ್ನು ಹಿರಿಯ ಸಾಹಿತಿಗಳಿಗೆ ರವಾನಿಸಿದ್ದೆ. ಪಾ.ವೆಂ. ಅವರಿಗೂ ಸಹ ಒಂದು ಪ್ರತಿ ಕಳಿಸಿ 'ಅಭಿಪ್ರಾಯ ತಿಳಿಸಿ' ಅಂತ ಕೋರಿದ್ದೆ.

ಪಾ.ವೆಂ. ಅವರು ತಮ್ಮ ಕೆಲಸ ಕಾರ್ಯಗಳ ನಡುವೆ ಬಿಡುವು ಮಾಡಿಕೊಂಡು ನನ್ನಂತಹ ಅನಾಮಧೇಯನಿಗೆ ಒಂದು ಪತ್ರ ಬರೆದರು. ನಾನು ಬ್ಯಾಕ್ ಬೆಂಚರು ನನ್ನಂತಹವನ ಅಭಿಪ್ರಾಯ ಕೇಳಿರುವ ನಿಮಗೆ ಏನನ್ನ ಬೇಕೋ ತಿಳೀದು... ಬೆಂಗಳೂರಲ್ಲೇ ಇದೀರಿ. ಬೆಂಗಳೂರಿನ ಅಂಡರ್‌ವರ್ಲ್ಡ್ ಬಗ್ಗೆ ರೋಚಕವಾಗಿ

ಬರೆಯುವುದು ಪ್ರಯತ್ನಿಸಿ ಅಂತ ಹಾರೈಸಿದ್ದರು. ಅಂಡರ್‌ವರ್ಲ್ಡ್‌ಉ, ಅಪ್ಪರ್‌ವರ್ಲ್ಡ್‌ನವರ ಗೊಡವೆ ಬೇಡ ಮಿಡಲ್ ಕ್ಲಾಸ್ ಬಡವ ನಾನು ಮಡಗಿದ ಹಾಗಿರು ಅಂತ ನಾನು ಮಿಡ್ಲ್ ಕಾಲಂ ಹಿಡಕೊಂಡು ಪಟ್ಟಾಗಿ ಕೂತುಬಿಟ್ಟೆ!

ಪಾ.ವೆಂ. ಅವರ ಸಾಹಿತ್ಯ ಕೃಷಿ ವೈವಿಧ್ಯಮಯವಾದದು. ಹಾಸ್ಯ, ವೈಚಾರಿಕೆ ಲೇಖನಗಳು, ಅರ್ಥಕೋಶ, ವೈಜ್ಞಾನಿಕ ಲೇಖನಗಳು ಹೀಗೆ ವಿವಿಧ ಪ್ರಕಾರಗಳಲ್ಲಿ ಹರಿದಿದೆ. ಅವರ 'ಲೈಟರ್‌ವೈನ್'ನ ಲೇಖನಗಳನ್ನೇ ಗಮನಿಸಿದಲ್ಲಿ ಉತ್ತರ ಕರ್ನಾಟಕದ ಕಸ್ತೂರಿ ಅನ್ನಬಹುದಾದಷ್ಟು ಕೃಷಿ ನಡೆಸಿದ್ದಾರೆ. ಒಂದು ದುರಂತ ಅಂದರೆ ನಮ್ಮ ಬರಹಗಾರರ ಸೃಷ್ಟಿಗಳು ಒಂದೇ ಕಡೆ ಸಿಗದಿರುವುದು ಮತ್ತು ಅಂತಹ ಬರಹಗಳನ್ನು ಕಾಪಾಡಲು ಯಾರೂ ಕ್ರಮ ತೆಗೆದುಕೊಳ್ಳದಿರುವುದು. ಪಾ.ವೆಂ. ಅವರ ಲೇಖನಗಳೂ ಸಹ ಹೀಗೇ ಹರಿದು ಹಂಚಿಹೋಗಿದೆ. ಸಾಹಿತಿ ಎಂಬಾತನಿಗೆ ತನ್ನ ಹೃದಯವೇ ತನ್ನ ಒರೆಗಲ್ಲಾಗಬೇಕು. ಎಂದು ಪಾ.ವೆಂ. ನನಗೆ ಬರೆದ ಪತ್ರದಲ್ಲಿ ತಿಳಿಸಿದ್ದರು. ಬಹುಶಃ ಅವರ ದೃಷ್ಟಿ ಸಹ ಇದೇ ಇದ್ದಿಬಹುದು,.

ಪಾ.ವೆಂ. ಅವರ ಕೈಬರಹ ರೇಖಾಗಣಿತದ ಹಲವಾರು ಚಿತ್ರಗಳ ಸಮ್ಮಿಲನ ಇದ್ದ ಹಾಗೆ ಇರುತ್ತಿತ್ತು. ಒಂದೊಂದೇ ಅಕ್ಷರವನ್ನು ಎನ್‌ಲಾರ್ಜ್ ಮಾಡಿ ಭೂತಗನ್ನಡಿಯಲ್ಲಿ ಹಿಡಿದು ನೋಡಿದರೆ ಒಂದು ಜ್ಯಾಮಿತಿಯ ಚಿತ್ರ ನೋಡಿದ ಅನುಭವ ಆಗುತ್ತಿತ್ತು. ಪಾ.ವೆಂ. ಅವರ ಲೇಖನಗಳೂ ಸಹ ಹಾಗೆಯೇ ವಿಶಿಷ್ಟವಾದ ಅನುಭವ ನೀಡುವಲ್ಲಿ ಸಫಲವಾಗುತ್ತಿವೆ. ಅವರು ನಮಗೆ ಎಂದೂ ಲಂಗೂಲಾಚಾರ್ಯರಾಗೇ ಅಚ್ಚೊತ್ತಿಬಿಟ್ಟಿದ್ದಾರೆ!

## ವಯಸ್ಕಾಂತ

ಏಕಾಂತದಲ್ಲೂ
ಕಾಂತಗುಣ
ತೋರದ ಕಾಂತ
ವಯಸ್ಕಾಂತ

ಎನ್. ಪ್ರಕಾಶ್

# ನಾಡಿಗೇರ ಕೃಷ್ಣರಾಯರು

(ಮಹನೀಯರುಗಳೊಂದಿಗೆ - ನಾನು ಕಂಡಂತೆ)

**– ನೀರಗುಂದ ಕೇಶವಮೂರ್ತಿ ರಾವ್**

ಕನ್ನಡಿಗರ ನಗೆಯ ನಾಡಿಯ ಗೇರನ್ನು ಗಗನಕ್ಕೇರಿಸಿದ ನಗೆಗಾರ ನಾಡಿಗೇರ ಕೃಷ್ಣರಾಯರು ಜನಿಸಿದ್ದು 1908ರ ಕೀಲರ ಸಂವತ್ಸರದ ಯುಗಾದಿ ಚೈತ್ರ ಶುದ್ಧ ಪಾಡ್ಯಮಿ. ಅವರು ನಮ್ಮೊಂದಿಗೆ ಇಂದು ಇದ್ದಿದ್ದರೆ ತೊಂಭತ್ತು ಮೂರು ವರ್ಷವಾಗಿರುತ್ತಿತ್ತು. ಕಣ್ಮರೆಯಾಗಿ (3-3-1992) ಎಂಟು ವರ್ಷಗಳಾಗಿವೆ.

ನಾಡಿಗೇರ ಕೃಷ್ಣರಾಯರ ನಗೆ ಬ(ರೆ)ರಹಗಳು ನೂರಾರು. ತಲೆಹರಟೆ, ಅಡ್ಡಾದಿಡ್ಡಿ, ಕಸದ ಬುಟ್ಟಿ, ಹಾಸ್ಯರಸಾಯನ, ಕೇಡಿಗನ ಕಿಡಿಗಳು, ನಾಡಿಗೇರರ ನಗೆ ಬರಹಗಳು ಅಲ್ಲದೆ ಹಲವಾರು ಕಾದಂಬರಿಗಳನ್ನು ಸಹ ಕನ್ನಡದ ಓದುಗರು ಮೆಚ್ಚಿದ್ದಾರೆ. ''ತಂದೆ ಸಾಯುವಾಗ ಮಂತ್ರಗಳ ವಿನಾ ಮತ್ತಾವ ಪುತ್ರಾರ್ಜಿತ ಆಸ್ತಿಯನ್ನು'' ಹೊಂದಿರದಿದ್ದ ವೆಂಕೋಬಬಾಯಿಯ ಕಥೆಯನ್ನು ಹೇಳುವ 'ಎದಿರೇಟು' ನಾಡಿಗೇರರ ಮೊತ್ತ ಮೊದಲ ಕಾದಂಬರಿ. (1960) ಇಂದಿಗೂ ಇದು ನನ್ನ ಅಚ್ಚು ಮೆಚ್ಚಿನ ಕಾದಂಬರಿಗಳಲ್ಲೊಂದು!

ಕನ್ನಡದ ನಗೆ ಲೇಖಿಲರಾಗಿದ್ದ ದಾಶರಥಿ ದೀಕ್ಷಿತ್‌ರವರು ಮತ್ತು ನಾಡಿಗೇರರು ಇಬ್ಬರೂ ಒಂದೇ ಊರಿನವರು. ಹರಿಹರದವರು ಅವರಿಬ್ಬರೂ Family Friends ಆಗಿದ್ದವರು. ನಾಡಿಗೇರರ ನೂರಾರು ಪ್ರಾಕ್ಟಿಕಲ್ ಜೋಕುಗಳನ್ನು ನೆನಪಿಸುತ್ತ ದಾ.ದೀ.ರವರು ಮೋಜಿನ ಪ್ರಸಂಗವನ್ನು ವಿವರಿಸಿದ್ದಾರೆ - ''ನಾಡಿಗೇರರಿಗೆ ಸಖತ್ ಕಾಯಿಲೆ ಆಗಿ ದಾವಣಗೆರೆಯ ದೊಡ್ಡಾಸ್ಪತ್ರೆಯಲ್ಲಿ ದಾಖಲು ಮಾಡಿದ್ದರು. ಡಾಕ್ಟರು ಬಹಳ ಶ್ರದ್ಧೆಯಿಂದ ಈ ನಗೆಗಾರನ ಜೀವ ಉಳಿಸಿದ್ದರು. ಕಡೆಗೊಮ್ಮೆ ವಾರ್ಡಿನಿಂದ ಬಿಡುಗಡೆಯಾಗುವ ದಿನ ಬಂತು. ಮಂಚದ ಮೇಲೆ ಕಣ್ಣೀರಿಡುತ್ತಾ ಕುಳಿತಿದ್ದಾರೆ ನಾಡಿಗೇರ್. 'ಪೂರ್ಣ ಗುಣವಾಗಿ ಮತ್ತೆ ಹರಿಹರಕ್ಕೆ ಹೋಗಬೇಕಾದರೆ ನಗಬೇಕ್ರಿ ನಾಡಿಗೇರ್! ಯಾಕೆ ದುಃಖ ಅರ್ಥವಾಗಲಿಲ್ಲ!' ಎಂದು ಡಾಕ್ಟರು ಅಚ್ಚರಿಗೊಂಡರು. ಆಗ ನಾಡಿಗೇರರು 'ಸಾರ್ ನಾನು ನಿಯತ್ತಿನ ಮನುಷ್ಯ. ಮಾತುಕೊಟ್ಟು ಅದರಂತೆ ನಡೆಯದಿದ್ದರೆ ಹೇಗೆ! ನಾನಿಲ್ಲಿಗೆ ಬರೋಕೆ ಮುಂಚೆ ನನ್ನ ತಮ್ಮನಿಗೆ ದುಡ್ಡು ಕೊಟ್ಟು ಆಯ್ತು ನನ್ನ ಕಥೆ ಮುಗೀತು. ಇನ್ನು ಆಸ್ಪತ್ರೆಯಿಂದ ಬರಲ್ಲ, ಈ ದುಡ್ಡು

ನನ್ನ ಕರ್ಮಾಂತಕ್ಕೆ ಸಂಸ್ಕಾರಕ್ಕೆ ಇರಲಿ ಇಟ್ಕೋ' ಎಂದು ಹೇಳಿ ಬಂದಿದ್ದೀನಿ. ಅಷ್ಟು ಹೇಳಿ ಬಂದವನು ನಾನು ಯಾವ ಮುಖ ಇಟ್ಕೊಂಡು ವಾಪಸ್ ಹೋಗಲಿ; ಅವರು ನನ್ನ ಏನಂತಾ ತಿಳಿತಾರೆ? ಹ್ಯಾಗೆ ಹೋಗಲಿ? ನನ್ನಿಂದ ಜೀವ ಸಹಿತ ಪರಿಹರಕ್ಕೆ ಹೋಗೋದು ನ್ಯಾಯವಾದದ್ದೇ ನೀವೇ ಹೇಳ್ರಿ'' ಎಂದು ಗೋಳಾಡಿದರಂತೆ. ಆಗ ಡಾಕ್ಟರು ನಕ್ಕು ನಕ್ಕು ಬೈ ಬೈ ಹೇಳಿ ಕಳಿಸಿಕೊಟ್ಟರಂತೆ! ನಾಡಿಗೇರ್ ನಮ್ಮೂರಿನ ಹೀರೋ ಆಗಿದ್ದವರು ಎನ್ನುತ್ತಾರೆ ದಾಶರಥೀ ದೀಕ್ಷಿತ್.

ಕನ್ನಡ ಸಾಹಿತ್ಯಕ್ಕೆ ತಾವೇನಾದರೂ ಸೇವೆ ಸಲ್ಲಿಸಿದ್ದರೆ ಅದಕ್ಕೆ ಕಾರಣ ಅ.ನ.ಕೃ. ಎನ್ನುತ್ತಾರೆ ನಾಡಿಗೇರರು. ಅ.ನ.ಕೃ. ಬೆನ್ನು ತಟ್ಟದಿದ್ದಲ್ಲಿ ತಾವು ಸಾಹಿತ್ಯ(ಕ್ಷೇತ್ರದ) ಅಖಾಡದಲ್ಲಿ ಕಾಬಾ ಕಟ್ಟಿ ಸೆಡ್ಡು ಹೊಡೆಯುವ ಗೋಜಿಗೆ ಹೋಗುತ್ತಿರಲಿಲ್ಲವಂತೆ, ಇವರಿಬ್ಬರ ಹೆಸರು ಸಾಹಿತ್ಯ ಕ್ಷೇತ್ರದಲ್ಲಿ ಬೆರೆತು ಹೋಗಿವೆ. ಇಬ್ಬರ ಸ್ನೇಹವಂತೂ ಮೂವತ್ತು ವರ್ಷಗಳಿಗೂ ಹೆಚ್ಚು. ನಾಡಿಗೇರರನ್ನು ಕುರಿತು ಅ.ನ.ಕೃ. ''ನನಗೆ ನಗೆ ಸಾಹಿತ್ಯದ ಬಗ್ಗೆ ಅಸಡ್ಡೆಯಲ್ಲ ಆದರೆ ಹೆಚ್ಚು ಒಲವಿರಲಿಲ್ಲ. ನಾಡಿಗೇರರಿಂದ ಆ ಬಲವನ್ನು ಕಲಿತಿದ್ದೇ ಅಲ್ಲ, ಅವರಿಂದ ಸ್ಫೂರ್ತಿಗೊಂಡು ನಾನೂ ನಗೆ ಲೇಖನಗಳನ್ನು ಬರೆದೆ'' ಎನ್ನುತ್ತಾರೆ. ಅವರ ಸಾಹಿತ್ಯವನ್ನು ಕುರಿತು ''ನಾಡಿಗೇರರ ಸಾಹಿತ್ಯ ವಿಕಾಸ ಪಡೆದುದು ಬುದ್ಧಿ ಬಲದಿಂದಲ್ಲ, ವಿದ್ಯಾಬಲದಿಂದಲ್ಲ, ಅನುಭವದಿಂದ. ಬಟ್ಟೆಯ ಅಂಗಡಿಯ ಒಡೆತನ, ಇದ್ದಿಲು ಅಂಗಡಿ ಕಂಟ್ರಾಕ್ಟ್, ಶ್ಯಾನುಭೋಗತನ, ಲಾಯರ್ ಗುಮಾಸ್ತಗಿರಿ, ಹೋಟೆಲ್ ವ್ಯವಸ್ಥಾಪಕ, ಕಂಪೆನಿ ನಟ, ಪತ್ರಿಕಾ ವ್ಯವಸಾಯಿ - ಇವು ನಾಡಿಗೇರರ ಜೀವನದ ಮೈಲಿಗಲ್ಲುಗಳು. ಇಂತಹ ರಸಪೂರ್ಣ ಬಾಳನ್ನು ಬಾಳಿದ ವ್ಯಕ್ತಿ, ಜೀವನದ ರನ್ನಗನ್ನಡಿಯಾಗುವುದೇನಚ್ಚರಿ! ಬಾಳಿನ ಕಹಿಯನ್ನು ಮರೆದು ಅದರ ಹಿಂದೆ ಎಲ್ಲೋ ಅಂಟಿಕೊಂಡಿರುವ ಅಲ್ಪಸ್ವಲ್ಪ ಸಿಹಿಯನ್ನು ಸವಿದು, ಬಾಳನ್ನೇ ಉದಾರ ದೃಷ್ಟಿಯಿಂದ ನೋಡಿ ತನ್ನ ಕಹಿ ಅನುಭವಗಳನ್ನು ನೆನದು ನಗುವ ಮನೋಭಾವ ನಾಡಿಗೇರರ ಒಂದು ಹಿರಿಯ ಗುಣ'' ಎಂದಿದ್ದಾರೆ.

ಕನ್ನಡದ ದಾರ್ಶನಿಕ ''ಮಂಕುತಿಮ್ಮನ ಕಗ್ಗದಲ್ಲಿ'' ನಗುವುದು ಸಹಜದ ಧರ್ಮ ಇನ್ನೊಬ್ಬರನ್ನು ನಗಿಸುವುದು ಶ್ರೇಷ್ಠವಾದ ಧರ್ಮ, ಇದಕ್ಕಿಂತ ಮಿಗಿಲಾಗಿ ಇನ್ನೊಬ್ಬರು ನಗುವುದನ್ನು ಕೇಳಿ ತಾನೂ ನಗುವುದು ಅತಿಶಯಧರ್ಮ ಎಂದು ಹೇಳಿರುವ ಡಿ.ವಿ.ಜಿ.ಯವರು ನಾಡಿಗೇರರನ್ನು ಕುರಿತು ''ನಾಡಿಗೇರ ಕೃಷ್ಣರಾಯರನ್ನು ನಾನು ಬಹಳ ವರ್ಷಗಳಿಂದ ಬಲ್ಲೆ. ಕೆಲವು ದಿನ ಅವರು ನಾನಿರುವ ಮನೆಯ ಸಮೀಪದಲ್ಲೇ ಇದ್ದರು... ಅವರ ಹಾಸ್ಯ ಪ್ರವೃತ್ತಿ ನನ್ನನ್ನು

ಎಷ್ಟೋ ಸಾರಿ ಸಂತೋಷಪಡಿಸಿದೆ. ಕುಗ್ಗಿದ ಮನಸ್ಸನ್ನು ಉಲ್ಲಾಸಪಡಿಸುವ ಶಕ್ತಿ ಅವರಲ್ಲಿದೆ'' ಎಂದಿದ್ದಾರೆ.

ಕನ್ನಡ ಸಾಹಿತ್ಯ ಪರಿಷತ್ತಿನ ಮಾಜೀ ಅಧ್ಯಕ್ಷರೂ 'ವಿನೋದ' ಹಾಸ್ಯ ಪತ್ರಿಕೆಯ ಸಂಪಾದಕರೂ ಆದ ಶ್ರೀ ಜಿ. ನಾರಾಯಣರು ''ಕನ್ನಡದ ಸರಸ್ವತಿಗೆ ಕಚಗುಳಿ ಇಟ್ಟು ಮುಖಕ್ಕೆ ಪ್ರಸನ್ನತೆಯನ್ನು ತಂದ ಖ್ಯಾತ ನಗೆ ಬರಹಗಾರರಲ್ಲಿ ನಾಡಿಗೇರರು ಪ್ರಮುಖರು. ಓದುಗರ ನರ ನಾಡಿಯ ಗೇರನ್ನು ಏರಿಸುತ್ತಾ ನಗೆಗಾರಿಕೆಯ ಹೊಸ ಹೊಸ ತೋಟಗಳನ್ನು ಕಾಣಿಸುತ್ತ ನಾಡಿಗೇರರು ಹಾಸ್ಯ ಪ್ರವಾಸ ಮಾಡಿಸುತ್ತಾರೆ' ಎನ್ನುತ್ತಾರೆ.

ಕನ್ನಡ ಪತ್ರಿಕಾರಂಗದ ಭೀಷ್ಮ ತಿ.ತಾ. ಶರ್ಮರು ಬಹಳ ದಿವಸಗಳ ನಂತರ ಭೇಟಿಯಾದಾಗ ''ನೀವು ಈಗ ಸರ್ವೇಯರ್ ಬೀದಿಯಲ್ಲಿ ತಾನೆ ಇರೋದು'' ಎಂದಾಗ ನಾಡಿಗೇರರು ''ಹೌದ್ಹೌದು ನಾನು ಸರ್ವೈವರ್ (ಬದುಕಿರುವ) ಬೀದಿಯಲ್ಲೇ ಇರುವುದು'' ಎಂದು ಉತ್ತರ ಕೊಟ್ಟರಂತೆ. ನಗೆ ಬರವಣಿಗೆಯಲ್ಲಿ ಮಾತ್ರವಲ್ಲದೇ ಆಡಿದ ಮಾತಿನಲ್ಲೂ ನಗೆಯ ಹೊಗೆ ಬರುತ್ತದೆ. ಆದರೆ ನಗೆಯ ಹಿಂದಿರುವ ನೋವು ಅಷ್ಟೇ ತೀಕ್ಷ್ಣವಾಗಿರುತ್ತಿತ್ತು. ಅವರು ಇನ್ನೊಬ್ಬರನ್ನು ನೋಡಿ ನಗುವುದಕ್ಕಿಂತ ತಮ್ಮನ್ನು ತಾವೆ ಕಂಡು ನಕ್ಕಿರುವುದು ಜಾಸ್ತಿ. ತಮ್ಮ ಈ ನಗೆಯ ಕಂಪನ್ನು ನಾಡಿಗೆಲ್ಲಾ ಹರಡಿದ್ದಾರೆ.

ನಾಡಿಗೇರರು ಪತ್ರಿಕಾ ರಂಗಕ್ಕೆ ಸಲ್ಲಿಸಿದ ಸೇವೆ ಅಪಾರ. ಅವರು ಸಂಪಾದಕರಾಗಿದ್ದ ಪತ್ರಿಕೆಗಳು ಒಂದೆರಡಲ್ಲ. ಸಂಜಯ, ದೇಶಬಂಧು, ಸಂಯುಕ್ತ ಕರ್ನಾಟಕ, ಜನಪ್ರಗತಿ ಮಲ್ಲಿಗೆ, ಮೈಸೂರು ಪ್ರಭ, ಉಷಾ ಪತ್ರಿಕೆಗಳಲ್ಲಿ ಸಂಪಾದಕರಾಗಿ ನಾಡಿನ ಹಲವಾರು ಹೊಸ ಪೀಳಿಗೆಯ ಲೇಖಕರನ್ನು ಬೆಳಸಿ ಮುಂದೆ ತಂದ ಕೀರ್ತಿ ನಾಡಿಗೇರರದ್ದು.

ಕನ್ನಡ ಖ್ಯಾತ ನಗೆಗಾರ ತಿಂಮ ಬ್ರಹ್ಮರೆಂದೇ ಹೆಸರುವಾಸಿಯಾಗಿದ್ದ ಬೀchi ಯವರು ನಾಡಿಗೇರರನ್ನು ಕುರಿತು ''ನಾವಿಬ್ಬರೂ ಬಹು ಹಳೆ ಕಾಲದ ಮಿತ್ರರು ಈ ಸ್ನೇಹವನ್ನು ಭದ್ರಪಡಿಸಲು ನಮಗೆ ಇನ್ನೊಂದು ಸೌಕರ್ಯವೂ ದೊರೆಯಿತು, ಅದನ್ನಿಲ್ಲಿ ಸ್ಮರಿಸದಿದ್ದರೆ ನಾನೊಬ್ಬ ಕೃತಘ್ನನಾಗುತ್ತೇನೆ. ಇಬ್ಬರೂ ...... ಮಿತ್ರ, ಮಾರ್ಗದರ್ಶಕ ಮತ್ತು ಬಂಧುಗಳಾದ ಅ.ನ.ಕೃ. ಗರಡಿಯಲ್ಲಿ ತಂಗಿದೆವು. ಅಲ್ಲಿ ಹರಟೆ ಹೊಡೆಯುತ್ತಾ ಕುಳಿತಾಗ ಅದನ್ನೇ ಸಾಹಿತ್ಯ ಚಿಂತನೆ ಎಂಬ ಗಂಭೀರ ಶಬ್ದಗಳಲ್ಲಿಯೂ ಹೇಳಬಹುದು... ನಾಡಿಗೇರರ ಮುಖದಿಂದ ಹೊರಟ ನಗೆ ಕಿಡಿಗಳೆಷ್ಟು? ಸಮಯಸ್ಫೂರ್ತಿ ನಾಡಿಗೇರರ ಆಸ್ತಿ. ನಾಡಿಗೇರರು

ಮಾತ್ರ ಅವರ ಸಂಸಾರಕ್ಕೆ ಒಂದು ಸಾಲ. ಇದು ಕಹಿಯಾಗಿರಬಹುದು. ಸತ್ಯ ಅನೇಕ ಬಾರಿ ಸಿಹಿಯಾದುದಕ್ಕಿಂತಲೂ ಕಹಿಯೇ ಹೆಚ್ಚು ಇದಕ್ಕೆ ಉಪಾಯವೆಲ್ಲಿ?

ಒಂದು ಸಂಜೆ ನಡು ರಸ್ತೆಯಲ್ಲಿ ಬೀchi ನಾಡಿಗೇರರ ಭೇಟಿ, ಅದು - ಇದು ಹರಟುತ್ತಾ ನಿಂತಾಗ ಒಬ್ಬ ಪೋಲೀಸು ಬಂದು ಗೌರವದಿಂದಲೇ ಗದರಿಸಿದಾಗಲೇ ಇವರಿಬ್ಬರಿಗೂ ತಾವೆಲ್ಲಿದ್ದೇವೆಂಬ ಅರಿವು. ಆನಂತರ ಫುಟ್‌ಪಾತ್ ಎಂದು ಕರೆಯಲು ಗಲೀಜು ಜಾಗದಲ್ಲಿ ನಿಂತಾಗ ಪರಸ್ಪರ ಸಂಭಾಷಣೆ -

ನಾಡಿಗೇರ್ - ನಿನ್ನ ಮಕ್ಕಳಿಬ್ಬರೂ ಪಾಸಾಗಿದ್ದಾರೇನಯ್ಯಾ?

ಬೀchi - ಆಗಿದ್ದಾರಪ್ಪ, ನಿನ್ನ ಮಕ್ಕಳು?

ಅದಕ್ಕೇನು ನಾಡಿಗೇರರ ಉತ್ತರ? ಅನೇಕ ತಂದೆ ತಾಯಿಗಳು ಇದನ್ನು ಬರೆದಿಟ್ಟುಕೊಂಡು ಬಾಯಿಪಾಠ ಮಾಡಬೇಕೆನ್ನುತ್ತಾರೆ ಬೀchi.

ನಾಡಿಗೇರರು ಹೇಳಿದ್ದು ''ಥೂ ನಿನ್ನ ಮಕ್ಕಳು ಬಾಳ ದುಬಾರಿ ಮಕ್ಕಳಪ್ಪಾ. ಪ್ರತಿವರ್ಷ ಹೊಸ ಪುಸ್ತಕಗಳು, ಹೆಚ್ಚಿನ ಸ್ಕೂಲು ಫೀಜು, ನನ್ನ ಮಕ್ಕಳನ್ನು ನೋಡು ಇದ್ದ ಕ್ಲಾಸಿನಲ್ಲಿಯೇ ಹಾಯಾಗಿ ಇದ್ದಾರೆ. ಅತೀ ಹಳೆಯ ಪುಸ್ತಕಗಳು ಅಷ್ಟೇ ಫೀಜು. ನನಗೆ ಹೆಚ್ಚಿನ ಖರ್ಚಿಲ್ಲ.''

''ಎಂಥ ನೋವಿನ ಪ್ರಸಂಗ? ಎಷ್ಟು ಲಘುವಾಗಿ ತೇಲಿಸಿ ನಕ್ಕುಬಿಟ್ಟರು'' ಎನ್ನುತ್ತಾರೆ. ಬೀchi.ನಾಡಿಗೇರರನ್ನು ಬಲ್ಲವರು ಬಹಳಷ್ಟು ಬರೆದಿದ್ದಾರೆ. ಆದರೆ ತಮ್ಮನ್ನು ತಾವೇ ಸಮಗ್ರ ಜೀವನವನ್ನು ಪರಿಹಾಸ್ಯವೆಂದೇ ಭಾವಿಸಿರುವ ನನ್ನ ಕಣ್ಣಿಗೆ ಎಲ್ಲವೂ ಸೊಟ್ಟು ಸೊಟ್ಟಗೆ. ಡೊಂಕು ಡೊಂಕಾಗಿ ಕಾಣುವುದು ಸ್ವಾಭಾವಿಕ. ಸಮಾಜದ ಓರೆ ಕೋರೆಗಳನ್ನು ಕಶ್ಮಲ ಕೊಳಚೆಗಳನ್ನು ಶುಚಿಗೊಳಿಸುವವ ಅಗಸ ಸಾಹಿತಿ. ಆದರೆ ಅಂತಹ ಅಗಸನಾಗಲು ನಾನು ಬಯಸಿಲ್ಲ. ಓರೆ ಕೋರೆಗಳೆಲ್ಲಿವೆ? ಕಶ್ಮಲ ಕೊಳಚೆಗಳೆಲ್ಲಿವೆ ಎಂಬುದನ್ನು ತೋರಿಸುವ ಸ್ಯಾನಿಟರಿ ಇನ್ಸ್‌ಪೆಕ್ಟರ್ ಮಾತ್ರ ಆಗಿದ್ದೇನೆ ಎಂದು ಕರೆದುಕೊಂಡಿದ್ದಾರೆ.

ಒಟ್ಟಾರೆ ನಾಡಿಗೇರರ ಹಾಸ್ಯ ಸಾಹಿತ್ಯವನ್ನು ಕುರಿತು ಡಾ|| ಎಂ.ಎಸ್. ಸುಂಕಾಪುರ ರವರು ತಮ್ಮ 'ಕನ್ನಡ ಸಾಹಿತ್ಯದಲ್ಲಿ ಹಾಸ್ಯ' ಎಂಬ ಗ್ರಂಥದಲ್ಲಿ ''ನಾಡಿಗರ ಕೃಷ್ಣರಾಯರು ಬರೆದಷ್ಟು ಹರಟೆಗಳನ್ನು ಕನ್ನಡದಲ್ಲಿ ಯಾರೂ

ಬರೆದಿಲ್ಲ. ಅವರ ನಗೆ ಬರಹಗಳು' ಕನ್ನಡ ಜನತೆಯನ್ನು ಸಾಕಷ್ಟು ನಗಿಸಿವೆ. ನಗಿಸುತ್ತಿಲಿವೆ, ಅವರ ತಲೆ ಹರಟೆ, ತಲೆ ಇಲ್ಲದವರ ಮುಖವನ್ನು ಇಷ್ಟಗಲ ಅರಳಿಸುತ್ತದೆ. ಅವರು ರಸಿಕರಾದವರಿಗೆ 'ಮೆಲ್ಲೋಗರ'ವನ್ನು ಉಣಿಸಿ 'ಅಡ್ಡಾದಿಡ್ಡಿ'ಯಾಗಿ ಜಿಗಿದಾಡಿದ್ದಾರೆ. ಒಟ್ಟಿನಲ್ಲಿ ತಿಳಿಯಾದ, ಸರಸವಾದ ಒಂದೊಂದು ಸಲ ಪ್ರಖರವಾದ ನಗೆಯನ್ನು ತಮ್ಮ ಪ್ರಬಂಧಗಳಲ್ಲಿ ತುಂಬಿದ ನಾಡಿಗರರಿಗೆ ಕನ್ನಡ ಸಾಹಿತ್ಯದಲ್ಲಿ ಒಂದು ದೊಡ್ಡ ಸ್ಥಾನವಿದೆ. ಅವರ ಪ್ರಬಂಧಗಳನ್ನು ಓದಿ ನಲಿಯುವುದೆಂದರೆ ಥಂಡಿ ಹಿಡಿದವರು ಒಂದೊಂದೇ ಹುರಿಗಾಳನ್ನು ನುರಿಸಿ ಬಾಯಲ್ಲಿ ಚಪ್ಪರಿಸಿದಂತೆ. ಅದನ್ನೋದಿ ಆನಂದಿಸುವವರಿಗೂ ಹಾಸ್ಯಶೀಲವಿದ್ದರೆ ಮುಗಿದೇ ಹೋಯಿತು ಮುಗಿಲು ಮೂರೇ ಗೇಣು'' ಎಂದು ದಾಖಲಿಸಿದ್ದಾರೆ.

ನಾಡಿಗೇರರ ಪರಿಚಯ ಪುಸ್ತಕದ ಮೂಲಕ ನನಗಾದದ್ದು 1960-61ರ ವೇಳೆ. ಈ ಕಾಲದಲ್ಲಿ ಅವರ ಎದಿರೇಟು, ತಲೆಹರಟೆ, ಮೆಲ್ಲೋಗರ, ಮೂರಕ್ಕೆ ಮುಕ್ತಿ ಮುಂತಾದ ಪುಸ್ತಕಗಳನ್ನು ಓದಿ ಆಕರ್ಷಿತನಾಗಿದ್ದೆ. ಕನ್ನಡ ಚಳುವಳಿಯ ಪ್ರಾರಂಭದ ಕಾಲ 1962ರ ಗಣೇಶನ ಹಬ್ಬದ ಸಂದರ್ಭದಲ್ಲಿ ಅ.ನ.ಕೃ., ರಾಮಮೂರ್ತಿ, ನಾಡಿಗೇರ್ ನಮ್ಮೂರಿಗೆ ಬರುವರೆಂಬ ಸುದ್ದಿ. ನಮಗೆಲ್ಲ ಎಲ್ಲಿಲ್ಲದ ಸಂಭ್ರಮ. ಹೆಸರಾಂತ ಸಾಹಿತಿಗಳನ್ನು ಕಣ್ಣಾರೆ ಕಂಡು ಅವರ ಭಾಷಣಗಳನ್ನು ಕೇಳುವ ಸುಯೋಗ! ಆ ದಿವಸ ಸಮೀಪಿಸಿತು. ಅ.ನ.ಕೃ. ರಾಮಮೂರ್ತಿ ಬಂದರು. ನಾಡಿಗೇರ್ ಅನಾರೋಗ್ಯ ನಿಮಿತ್ತ ಬರಲಿಲ್ಲ... ಅಂದಿನ ದಿವಸದ ಭಾಷಣ ಇಂದಿಗೂ ಮರೆತಿಲ್ಲ... ಬೆಂಗಳೂರಿಗೆ ಬಂದ ನಂತರ ನಾಡಿಗೇರರ ದರ್ಶನವಾದದ್ದು ಸುಭಾಷ್ ನಗರದಲ್ಲಿ ಕರ್ನಾಟಕ ಸಂಯುಕ್ತ ರಂಗ ಏರ್ಪಡಿಸಿದ ರಾಜ್ಯೋತ್ಸವ ಸಮಾರಂಭದ ವೇದಿಕೆಯಲ್ಲಿ ಕನ್ನಡ ಚಳವಳಿಯ ಚಕ್ರವರ್ತಿ ಅ.ನ.ಕೃ., ಮಹಾಮಂತ್ರಿ ನಾಡಿಗೇರರು ಮತ್ತು ಧೀರ ಸೇನಾನಿ ಮ. ರಾಮಮೂರ್ತಿ! ಅನಂತರ ಬೆಂಗಳೂರಿನಲ್ಲಿ ವಿವಿಧ ಜಾಗಗಳಲ್ಲಿ ಸಭೆ ಸಮಾರಂಭಗಳಲ್ಲಿ 'ತ್ರಿಮೂರ್ತಿ' ಆನಂತರ ಬೆಂಗಳೂರಿನಲ್ಲಿಯ ವಿವಿಧ ಜಾಗಗಳಲ್ಲಿ ಸಭೆ ಸಮಾರಂಭಗಳಲ್ಲಿ 'ತ್ರಿಮೂರ್ತಿ'ಗಳ ಭಾಷಣ. ಕೆಲವೊಮ್ಮೆ 'ನಗರದಲ್ಲಿ ಇಂದು' ಪತ್ರಿಕೆಯ ಕಾಲಂ ನೋಡಿ ಸಂಜೆ ನಾಡಿಗೇರರ ಭಾಷಣಕ್ಕೆ ಹಾಜರು! ಅವರ ಹಾಸ್ಯ ಚಟಾಕಿಗಳು ಇಂದಿಗೂ ಮರೆತಿಲ್ಲ. ಮುಂದೊಂದು ದಿನ ನಾಡಿಗೇರರ ಅಮೃತ ಹಸ್ತದಿಂದ ನಾನು ಓದಿದ ಕಾಲೇಜಿನ 'ಉದಯೋನ್ಮುಖ ಬರಹಗಾರನೆಂಬ ಪ್ರಶಸ್ತಿ ಸ್ವೀಕರಿಸುತ್ತೇನೆಂದು ಕನಸುಮನಸಿನಲ್ಲೂ

ನಿರೀಕ್ಷಿಸಿರಲಿಲ್ಲ ಜಿ. ನಾರಾಯಣರ - ಪರಿಷತ್ತಿನ ಅಧ್ಯಕ್ಷರಾದಾಗ ಕನ್ನಡ ರಾಜ್ಯೋತ್ಸವದ ಸಂದರ್ಭದಲ್ಲಿ ಮನೆ ಮನೆಗೂ ಕನ್ನಡ ಪುಸ್ತಕಗಳ ಮಾರಾಟ ಮಾಡುವ ಯೋಜನೆ ಹಮ್ಮಿಕೊಂಡಾಗ ಆ ದಿನ ಬಸವನ ಗುಡಿಯ ನಮ್ಮ ಗುಂಪಿಗೆ ನಾಡಿಗೇರರೇ ನಾಯಕರು. ಆಗಿನ ಅನುಭವಗಳು (ಪುಸ್ತಕಗಳನ್ನು ಕೊಂಡೋದದ ಕನ್ನಡಿಗರ ಮನೋಭಾವ) ಮರೆಯುವಂತೆಯೇ ಇಲ್ಲ. ಹೀಗೆ ನಕ್ಕು ನಗಿಸಿದ ನಾಡಿಗೇರ ಕೃಷ್ಣರಾಯರ ನಗೆ-ಹಾಸ್ಯ ಪ್ರಸಂಗಗಳನ್ನು ಆಗಾಗ ಮೆಲುಕು ಹಾಕುತ್ತಿದ್ದರೆ ಕಾಲದ ಪರಿಮಿತಿ ಇರುವುದಿಲ್ಲ.

★★★



''ಕಾಫಿಗೆ ಸಕ್ರೆ ಹಾಕಿಲ್ಲ ಕಣೇ, ಸುಮ್ನೆ ಕ್ಯಾಲರಿ ಯಾಕೆ ಅಂತ''

# ನಾಡಿಗೇರ್ ಕೃಷ್ಣರಾಯರು.....

- ಪ್ರಭಾ

1960-65ರ ಕಾಲಾವಧಿ ಅಂತ ತೋರುತ್ತೆ. ಆಗಿನ್ನೂ ನಾವು ಸಣ್ಣ ಹುಡುಗರು. ನರಸಿಂಹಯ್ಯನವರ ಪತ್ತೇದಾರಿ ಕಾದಂಬರಿಗಳನ್ನು ಆಗತಾನೇ ಓದಲು ಆರಂಭಿಸಿದ್ದವರು ಅಥವಾ ನರಸಿಂಹಯ್ಯನವರ ಹಂತದಿಂದ ಕೊಂಚ ಮೇಲೇರಲು ಪ್ರಯತ್ನಿಸುತ್ತಿದ್ದವು. 1960ರಲ್ಲಿ ಅಂತ ಕಾಣುತ್ತೆ - ''ಕನ್ನಡ ಚಳುವಳಿ'' ಸಂಘಟನೆಯನ್ನು ಅ.ನ.ಕೃ. ಅವರು ಆರಂಭಿಸಿದ್ದರು. ಬೆಂಗಳೂರಿನಲ್ಲಿ ಹೇಳ ಹೆಸರಿಲ್ಲದೇ ಪರಭಾಷೆಗಳ ಪ್ರವಾಹದಲ್ಲಿ ಭುವನೇಶ್ವರಿ ತಾಯಿ ಕೊಚ್ಚಿಕೊಂಡು ಹೋಗುತ್ತಾಳೆ ಎಂದು ಅಳಿದುಳಿದ ಕನ್ನಡಿಗರು ಭಯಪಡುತ್ತಿದ್ದ ಕಾಲ ಅದು. ಕನ್ನಡ ಚಳುವಳಿಯ ಮುಂಚೂಣಿಗೆ ಆಗಿನ ಪ್ರಸಿದ್ಧ ಸಾಹಿತಿಗಳು, ಜನಪ್ರಿಯ ಸಾಹಿತಿಗಳು ಬಂದು ನಿಂತಿದ್ದ ಕಾಲ ಅದು. ಅ.ನ.ಕೃ. ಸಂಗಡ ಬೀಚಿ ಎಂ. ರಾಮಮೂರ್ತಿ, ಕುಮಾರವೆಂಕಣ್ಣ, ನಾಡಿಗರ್ ಮೊದಲಾದವರು ಬಂದು ಸೇರಿದ್ದರು. ಬೆಂಗಳೂರಿನ ಎಲ್ಲ ಬಡಾವಣೆಗಳಲ್ಲಿ ಸಭೆ ಸಮಾರಂಭ ಸರಿಸಿ ಕನ್ನಡಿಗರಿಗೆ ನಿಮ್ಮತನ ನೀವು ಉಳಿಸಿಕೊಳ್ಳಿ, ಕನ್ನಡ ಸಿನೇಮಾ ನೋಡಿ, ಕನ್ನಡ ಪತ್ರಿಕೆ ಓದಿ, ಕನ್ನಡದ ಪುಸ್ತಕಗಳನ್ನು ಓದಿ, ನಿಮ್ಮ ದಿನನಿತ್ಯದ ವ್ಯವಹಾರದಲ್ಲಿ ಕನ್ನಡ ಬಳಸಿ, ಕನ್ನಡಕ್ಕೆ ಎರಡುಸಾವಿರ ವರ್ಷಗಳ ಇತಿಹಾಸವಿದೆ, ಕನ್ನಡ ಪುಲಿಕೇಶಿ ಹಾಗಿದ್ದ ನಮ್ಮ ಕೃಷ್ಣದೇವರಾಯ ಹಾಗಿದ್ದ, ನಮ್ಮ ಪುರಂದರ ದಾಸರು ಹಾಗಿದ್ದರು, ನಮ್ಮ ನಾಡು ಕಾವೇರಿಯಿಂದ ಗೋದಾವರಿವರೆಗೆ ಹಬ್ಬಿತ್ತು, ನಮ್ಮ ರಾಜರು ಇಡೀ ಭೂಮಂಡಲದ ಒಡೆಯರಾಗಿದ್ದರು ಮೊದಲಾಗಿ ಕನ್ನಡಿಗರನ್ನ ಎಚ್ಚರಿಸುವ ಕೆಲಸ ಆರಂಭ ಆಗಿತ್ತು. ನಾಡಿಗೇರ್ ಕೃಷ್ಣರಾಯರು ಈ ಚಳುವಳಿಯ ಮುಂಚೂಣಿಯಲ್ಲಿದ್ದವರು, ಅ.ನ.ಕೃ. ಅವರಿಗೆ ಹೆಗಲು ನೀಡಿದವರು.

ಚಳವಳಿ ಕೇಂದ್ರ ಮಂಡಲಿ ಅಂತ ಒಂದು ಮಂಡಲಿ ಇತ್ತು, ಅದರ ವತಿಯಿಂದ ಬೆಂಗಳೂರಿನಲ್ಲಿ ಭಾಷಣಗಳು ನಡೀತಿದ್ದವು. ಭಾಷಣಗಳಿಗೆ ಎರಡು ಮೂರು ಸಹಸ್ರ ಜನ ನೆರೀತಿದ್ದರು. 'ಚಳುವಳಿ' ಅಂತ ಒಂದು ಎಂಟು ಪುಟದ ಪತ್ರಿಕೆ ಬೇರೆ ಅಚ್ಚಾಗುತ್ತಿತ್ತು. ಚಳುವಳಿ ಅನ್ನುವ ಪತ್ರಿಕೆಯ ಪ್ರತಿಗಳನ್ನು ಈ ಸಭೆಗಳಲ್ಲಿ ಮಾರಾಟ ಮಾಡುತ್ತಿದ್ದರು. ನಾವು ಚಿಕ್ಕ ವಯಸ್ಸಿನವರು ಅಂತ ಹೇಳಿದ್ದೆ. ನಮಗೆಲ್ಲಾ ಆಗ ಈ ರೀತಿಯ ಸಭೆಗಳು ಒಂದು ರೀತಿ ಹುಮ್ಮಸ್ಸನ್ನು

ಘುರುಪನ್ನು ತುಂಬುತ್ತಿತ್ತು ರಾಜಾಜಿನಗರ, ಮಲ್ಲೇಶ್ವರ, ಶ್ರೀರಾಂಪುರ, ಮೈಸೂರ್‌ಬ್ಯಾಂಕ್ ಸರ್ಕಲ್ಲು ಇಂತಹ ಕಡೆ ಎಲ್ಲೇ ಈ ಸಭೆ ನಡೆಯಲಿ ತಪ್ಪದೇ ಹಾಜರಾಗುತ್ತಿದ್ದೆ.

ಸಭೆ ಆರಂಭಕ್ಕೆ ಮೊದಲು ಒಂದು ಚಿಕ್ಕ ಪ್ರಾರ್ಥನೆ, ನಂತರ ಮೈಸೂರು ರಾಜ ಅನ್ನುವವರಿಂದ (ಮೈಸೂರು ರಾಜ ಅಂತಲೇ ಅವರ ಹೆಸರು ಎಂದು ನನ್ನ ನೆನಪು) ಪ್ರಾಸ್ತಾವಿಕ ಭಾಷಣ. ನಂತರ ಅ.ನ.ಕೃ. ನಿಂತರು ಅಂದರೆ ಓತಪ್ರೇತವಾಗಿ ಒಂದೂವರೆ ಎರಡು ಘಂಟೆಗಳ ಭಾಷಣ - ಅದರಲ್ಲಿ ನಮ್ಮ ಇತಿಹಾಸ, ನಮ್ಮ ಕಲೆ, ನಮ್ಮ ಸಂಸ್ಕೃತಿ ನಮ್ಮ ಭಾಷೆ ಇವುಗಳ ಬಗ್ಗೆ ಅಪಾರವಾದ ತಿಳುವಳಿಕೆ ನೀಡಬಲ್ಲಂತಹ ಅಂಶಗಳು. ಅವರ ಹೇಳಿಕೆಗೆ ಪೂರಕವಾಗುವಂತಹ ವಿದ್ವಾಂಸರುಗಳ ಹೇಳಿಕೆಗಳಿಂದ ಉದ್ಧತ ವಾಕ್ಯಗಳು ಹರೀತಿತ್ತು. ಅ.ನ.ಕೃ. ಅಂದರೆ ಒಂದು ರೀತಿಯ ಆರಾಧನಾ ಮನೋಭಾವ ಆಗಿನ ಕನ್ನಡಿಗರಲ್ಲಿ. ಅ.ನ.ಕೃ. ಅವರು ಭಾಷಣ ಮುಗಿಸಿ ಕೂತ ನಂತರ ನಾಡಿಗೇರರೋ, ಬೀಚಿ ಅವರೋ ಮೈಕ್ ಬಳಿ ಬರುತ್ತಿದ್ದರು. ಬೀಚಿ ಅವರದ್ದು ಅವರ ಬರಹಗಳ ರೀತಿಯೇ ಹರಿತವಾದ ನಾಲಿಗೆ, ಬಳ್ಳಾರಿಯ ಗಡಸುತನ ಮತ್ತು ವ್ಯಂಗ್ಯ, ಮೊನಚು ಇರುತ್ತಿದ್ದ ಮಾತುಗಾರಿಕೆ. ನಾಡಿಗೇರರದ್ದು ಒಂದು ರೀತಿಯ ಅತಿ ಸೌಮ್ಯವಾದ ಭಾಷಣ. ಮೆದು ಮಾತಿನಿಂದಲೇ ಜನರನ್ನು ಮೈದಡವಿ ತಿಳಿಸುವಂತಹ ಚಾಕಚಕ್ಯತೆ ಅವರ ಮಾತುಗಳಲ್ಲಿ. ಅವರ ಒಂದು ಭಾಷಣ ಇನ್ನೂ ನನ್ನ ನೆನಪಿನಲ್ಲಿದೆ.

ಸಂಘಟಕರು ಬಂದು ಇವತ್ತು ಭಾಷಣ ಇದೆ. ನೀವು ಬರಬೇಕು ಅಂದರು. ನಾನೇನೂ ಯೋಚಿಸಲೇ ಇಲ್ಲ. ಆಗಲಿ ಬರ್ತೀನಿ ಅಂದುಬಿಟ್ಟೆ. ಯಾಕೆ ಗೊತ್ತಾ? ಅಕಸ್ಮಾತ್ ನಾನು ಬರುಕ್ಕೆ ಆಗುಲ್ಲ ಅಂದುಬಿಟ್ಟರೆ ಬೇರೆ ಭಾಷೆಯವರು ಈ ಛಾನ್ಸ ಒಪ್ಪಿಕೊಂಡುಬಿಟ್ಟರೆ ನನಗೆ ಸಿಕ್ಕಿರೋ ಅವಕಾಶ ತಪ್ಪುತ್ತೆ ಅಂತ... ಜನ ಹೋ ಅಂತ ನಕ್ಕು ಚಪ್ಪಾಳೆ ಬಾರಿಸಿ ಸುಧಾರಿಸಿದ ನಂತರ ನಾಡಿಗೇರರು ಮುಂದುವರೀತಿದ್ದರು.... ಭಾಷಣ ತಪ್ಪಿಸಿಕೊಂಡರೂ ಅದಕ್ಕೂ ಪರ್ಯಾಯವಾಗಿ ಬೇರೆ ಭಾಷಣಕಾರರು ಬಂದು ಬೇರೆ ಭಾಷೇಲಿ ಮಾತನಾಡಿದರೂ ನಮ್ಮ ಜನ ಕೇಳ್ತಾರೆ. ಭಾಷೆ ಎಂದೇ ಇದ್ದರೂ ಅದನ್ನ ಅರ್ಥ ಮಾಡ್ಕೋತಾನೆ - ಯಾಕೆ ಗೊತ್ತಾ? ಗೊತ್ತಿಲ್ಲವಾ? ನಮ್ಮ ಜನ ಹೇಗೆ ಅಂತ ನೃಪತುಂಗ ಅನ್ನೋನು ಸಾವಿರ ವರ್ಷದ ಹಿಂದೇನೇ ಕಲ್ಲಿನಲ್ಲಿ ಕೆತ್ತಿಟ್ಟುಬಿಟ್ಟಿದ್ದಾನೆ. ಬಳಪ ಸ್ಲೇಟು ಹಿಡಕೊಂಡು ಒಂದೇ ಒಂದು ಸಲ ಬರೀದಿದ್ದರೂ ನಾವು ಪಂಡಿತರಂತೆ. ಅದರಿಂದಲೇ ಈಗ ನಾವು ಕನ್ನಡ ಒಂದುಬಿಟ್ಟು ಮಿಕ್ಕೆಲ್ಲ ಭಾಷೇಲಿ ಪಾರಂಗತರಾಗಿರೋದು...''

ನಾಡಿಗೇರರದು ಚಿಕ್ಕಹುಟ್ಟು ಅಂತಾರಲ್ಲಾ ಅಂತಹದ್ದು. ಐವತ್ತು ಕೇಜಿ ತೂಕ ಇದ್ದಿರಬಹುದು ಐದು ಐದೂಕಾಲಡಿ ಎತ್ತರ. ಕಚ್ಚೆ ಪಂಚೆ ಉಟ್ಟು ಬೆನ್ನಿಗೆ ಹತ್ತಿದ ಹೊಟ್ಟು ಮೇಲೆ ಜುಬ್ಬಏರಿಸಿ ಇವರು ಸಭೆ ಸಮಾರಂಭಗಳಿಗೆ ಆಗಮಿಸುತ್ತಿದ್ದುದು. ಚಳವಳಿ ಸಭೆಗಳಲ್ಲ ಇವರು ಇತರ ಸಾಹಿತ್ಯದ ಕಾರ್ಯಕ್ರಮಗಳಿಗೂ ಚಡಪಡಿಸಿದರು. ತಮ್ಮ ಸಂಸಾರದ ಪ್ರಸಂಗಗಳೇ ಇವರ ಭಾಷಣದ ವಸ್ತುಗಳು. ವಿವೇಕ ವರ್ಧಿನಿ ಶಾಲೆಯಲ್ಲಿ ಅವತ್ತು ಒಂದು ಕಾರ್ಯಕ್ರಮಕ್ಕೆ ಬಂದಿದ್ದರು. ಶ್ರಾವಣ ಮಾಸದಲ್ಲಿ ಉಲಾವು (ಪಡಿ) ಬೇಡುವುದು ಕೆಲವು ಮನೆಗಳಲ್ಲಿ ಸಂಪ್ರದಾಯ. ಈಗಲೂ ಸಹ ಕೆಲವು ಸಂಪ್ರದಾಯಸ್ಥ ಕುಟುಂಬಗಳಲ್ಲಿ ಉಲಾವು ಬೇಡೋದು ನಡೆದಿದೆ. ಶ್ರಾವಣ ಮಾಸದ ಶನಿವಾರದಂದು ಹಣೆಗೆ ಮೂರುನಾಮ ಬಳಿದುಕೊಂಡು ಕೈಯಲ್ಲಿ ಒಂದು ಕಂಚಿನದ್ದೋ ಅಥವಾ ತಾಮ್ರದ್ದೋ ಚೊಂಬು ಹಿಡಿದು, ಚೊಂಬಿನಲ್ಲಿ ನಾಮಗಳನ್ನು ಬರೆದು ಪ್ರತಿ ಮನೆ ಶ್ರೀ ವೆಂಕಟೇಶಾಯ ನಮಃ ಎಂದು ಜೋರಾಗಿ ಹಳುವುದು. ಮನೆಯವರು ಅಕ್ಕಿ ಬೆಲ್ಲ, ನಾಲ್ಕಾಣೆ ದಕ್ಷಿಣೆ ಸುರಿಯುವುದು ವಾಡಿಕೆ. ಮನೇಲಿ ಅಕ್ಕಿ ಇಲ್ಲ ಅಂತ ಶ್ರೀಮತಿ ನಾಡಿಗೇರರು ಅವರ ಇಬ್ಬರು ಮಕ್ಕಳ ಕೈಲೂ ಭಾರೀಗಾತ್ರದ ತಾಮ್ರದ ಚೆಂಬು ನೀಡಿ ಉಲಾವಿಗೆ ಕಾಸ್ಟ್ಯೂಮ್ಸ್ ಸಮೇತ ಕಳಿಸಿದರು. ನಾಡಿಗೇರರು ಮನೆಗೆ ಸೇರಿದಾಗ ಮನೆ 'ಬಿಕೋ' ಅಂತ ಇತ್ತು. ಹೆಂಡತಿಯ ಅಳು ಕೇಳಿಸುತ್ತಿತ್ತು. ಇವರು ಹೆಂಡತೀನ ಕರೆದು 'ಯಾಕೇ ಅಳ್ತಿದೀ? ಏನಾಯಿತು?' ಅಂದರು. 'ಇಬ್ಬರೂ ಮಕ್ಕಳನ್ನ ಇವತ್ತು ಬೆಳಿಗ್ಗೆ ಉಲಾವು ಬೇಡುಕ್ಕೆ ಅಂತ ತಾಮ್ರದ ಚೊಂಬು ಕೊಟ್ಟು ಕಳಿಸಿದ್ದೆ. ಅವರನ್ನ ಭಿಕ್ಷುಕರ ನಿವಾರಣಾ ಸಮಿತಿ ಅವರು ಹಿಡಿಕೊಂಡು ಹೋಗಿಬಿಟ್ಟರಂತೆ. ಅಂತ ಹೆಂಡತಿ ಅಳು ಜೋರು ಮಾಡಿದರು. ಆ ಕಾಲದಲ್ಲಿ ಭಿಕ್ಷೆ ಬೇಡುವವರನ್ನು ಹಿಡಿದು ಅವರನ್ನ ಆಗ ಊರಾಚೆ ಇದ್ದ ಬೆಗ್ಗರ್ಸ್ ಕಾಲೋನಿಗೆ ರವಾನೆ ಮಾಡುತ್ತಿತ್ತು ಸರ್ಕಾರ. ಬೆಗ್ಗರ್ಸ್ ಕಾಲೋನಿ ಸುತ್ತಲೂ ದೊಡ್ಡ ಗೋಡೆ ಅದರೊಳಗೆ ಸೇರಿದವರಿಗೆ ಪ್ರತಿ ದಿವಸ ಕೆಲಸ ಮತ್ತು ಊಟದ ಜವಾಬ್ದಾರಿ ಸರ್ಕಾರದ್ದಾಗಿತ್ತು.

ನಾಡಿಗೇರರು ಹೆಂಡತಿಗೆ ಸಮಾಧಾನ ಮಾಡಿದರು ''ಮಕ್ಕಳು ಎತ್ತರದ ಕಾಂಪೌಂಡ್ ಇದ್ದರೂ ಕಾಂಪೌಂಡು ಹಾರಿ ಮನೆಗೆ ಬರ್‍ತಾರೆ ಬಿಡು. ಅದಕ್ಯಾಕೆ ಚಿಂತಿಸ್ತೀ?...'' ಅದಕ್ಕೆ ಹೆಂಡತಿ ಉತ್ತರ ಹೇಳಿದ್ದು ಹೇಗೆ ಗೊತ್ತೇ? 'ಅಯ್ಯೋ ಅವು ಬರ್‍ತಾವ್ರೀ ಮಕ್ಕಳ ಬಗ್ಗೆ ನನಗೆ ಚಿಂತೆ ಇಲ್ಲ. ಆದರೆ ಎರಡು ತಾಮ್ರದ ಚೆಂಬು ಹೋದವಲ್ರೀ...'' ಅವರ ಭಾಷಣದ ತುಂಬಾ ಇಂತಹ ನಗೆ ಉಕ್ಕಿಸುವ ಪ್ರಸಂಗಗಳು.

ಮಧ್ಯಾಹ್ನ ಉಂಡು ಮಲಗಿದ್ದರು ಇವರು. ಕುಂಬಳ ಕಾಯಿ ಬಿದ್ದ ಶಬ್ದ ಕೇಳಿಸಿತು. ಮನೇಲಿ ಕುಂಬಳಕಾಯಿ ತಂದಿಲ್ಲ ಅದೆಲ್ಲಿಂದ ಬಿತ್ತು ಅಂತ ಹಿತ್ತಲಿಗೆ ಓಡಿದರು. ಅಲ್ಲಿ ಅವರತ್ತೆ ಏಣಿ ಹತ್ತುಕ್ಕೆ ಅಂತ ಹೋದವರು ಏಣಿ ಮೆಟ್ಟಲು ಇವರ ಬಾರಕ್ಕೆ ಮುರಿದು ಕೆಳಗೆ ಬಿದ್ದಿದ್ದರು - ಅದು ಇವರಿಗೆ ಕುಂಬಳ ಕಾಯಿ ಬಿದ್ದ ಹಾಗೆ ಕೇಳಿಸಿತ್ತು. ಸದ್ಯ ಕುಂಬಳಕಾಯೇ ಬಿದ್ದಿದ್ದರೆ ಹಾಳಾಗ್ತಿತ್ತು; ಅತ್ತೆ ಬಿದ್ದಿದ್ದು! ಎರಡು ಮೂರು ವಾರ ಬರೇ ನೋವಿರುತ್ತೆ ಅಷ್ಟೇ ಎಂಬ ಸಮಾಧಾನ!

ನಾಡಿಗೇರರಷ್ಟು ಬಿಡಿ ಬರಹಗಳನ್ನು ಬರೆದವರು ಬಹುಶಃ ಬಹಳ ಲೇಖಕ ಜನರಿರಲಿಕ್ಕಿಲ್ಲ. ಕೆಳ ಮಧ್ಯಮ ವರ್ಗದ ಜನರ ನೋವು ನಲಿವುಗಳಿಗೆ ಬವಣೆಗಳಿಗೆ ಹಾಸ್ಯದ ಲೇಪನ ಹೊದಿಸಿ ಚಿತ್ರಿಸಿದ ಪ್ರಸಂಗಗಳು ತೆಳು ನಗುವನ್ನು ಹೊರಹೊಮ್ಮಿಸಿ ನಂತರ ಸಮಾಜದಲ್ಲಿನಲ್ಲಿ ಕೆಳಸ್ತರದವರ ಬಗೆಗೆ ಒಂದು ಒಂದು ರೀತಿಯ ಅನುಕಂಪ ಸೃಷ್ಟಿಯಾಗುತ್ತಿತ್ತು.

ಆ ಕಾಲದ ನಾಟಕದವರ ರೀತಿ ನೀಳವಾದ ಕೂದಲನ್ನು ಹಿಂದಕ್ಕೆ ಬಾಚುತ್ತಿದ್ದರು. ವಿಶಾಲವಾದ ಹಣೆ. ಉಬ್ಬಿಕೊಂಡ ಕೆನ್ನೆ ಮೂಳೆಗಳು ಮತ್ತು ಎಲ್ಲ ಹಾಸ್ಯ ಸಾಹಿತಿಗಳ ಹಾಗೇ ಮುಖದಲ್ಲಿ ಒಂದು ವಾರ ಉಪವಾಸವಿದ್ದವರ ಕಳೆ. (ಈ 'ಕಳೆ'ಗೆ ಹೊರತಾದವರೂ ಹಲ ಸಾಹಿತಿಗಳು ಇದ್ದರು) ಒಂದು ಸಲ ಭಾಷಣ ಮಾಡುಕ್ಕೆ ಅಂತ ನಾಡಿಗೇರರು ಮೈಕಿನ ಮುಂದೆ ಬಂದರು. ಇದ್ದಕ್ಕಿದ್ದ ಹಾಗೇ ಕಚ್ಚೆ ಪಂಚೆಯ ಒಂದು ತುದಿಯನ್ನು ನೆಲಕ್ಕೆ ಬಿಟ್ರು. ನಾಟಕದ ಕಂಪೆನಿಗಳ ರಾಜರ ಪಂಚೆ ತರಹ ಆಯಿತು. 'ನಾನು ಚಿಕ್ಕವನಿದ್ದಾಗ ಭೀಮನ ಪಾತ್ರ ಮಾಡುತ್ತಿದ್ದೆ - ಅಂತ ಹೇಳಿ ಕದಿರುಕಡ್ಡಿ ಕಾಲುಗಳನ್ನು ಅಗಲಿಸಿ ಒಂದು ಕೈಯಲ್ಲಿ ಗದೆ ಹೊತ್ತು ಅದನ್ನ ಹೆಗಲ ಮೇಲಿರಿಸಿದ ಹಾಗೆ ನಟಿಸಿ ಎಡಗೈಯನ್ನು ಸೊಂಟದ ಮೇಲಿರಿಸಿ 'ಹಹಹಾ....' ಅಂತ ಘರ್ಜಿಸಿದರು! ಇವತ್ತು ನಗುವುದಿಲ್ಲ. ಅಂತ ಹಟ ಹಿಡಿದು ಕೂತಿದ್ದವರೂ ಸಹ ಪಕ್ಕೆ ಹಿಡಕೊಂಡು ಹತ್ತು ನಿಮಿಷ ಸುಧಾರಿಸಿಕೊಂಡಿದ್ದು ನಾನು ನೋಡಿದ.

ನಾಡಿಗೇರರ ಕೃತಿಗಳು ಈಗ ಸಿಗುತ್ತಿಲ್ಲ. ಅವರ ಬಿಡಿ ಬರಹಗಳಂತೂ ಎಲ್ಲೆಲ್ಲಿ ಹರಡಿ ಪಂಚಿಹೋಗಿವೆಯೋ ತಿಳಿಯದು. ಸರ್ಕಾರ ಅಥವಾ ಯಾವುದಾದರೂ ಸಂಸ್ಥೆ ಅಕಾಡೆಮಿ ಈಗ ಲಭ್ಯವಿರುಂತಹ ಬರಹಗಳನ್ನು ಒಂದು ವ್ಯವಸ್ಥಿತ ರೂಪದಲ್ಲಿ ಸಂಗ್ರಹಿಸಿ ಪ್ರಕಟಿಸುವುದು ಒಳ್ಳೆಯದು - ಮುಂಚಿನ ಪೀಳಿಗೆಗಳಿಗೂ ಈ ಸಾಹಿತ್ಯದ ಮುಂದುವರಿಕೆ ಆಗಬೇಕು. ಒಂದು ಪೀಳಿಗೆಯ ಸಂಸ್ಕೃತಿ ಮತ್ತು ಕಲೆ ಮುಂದುವರೆಯಬೇಕಾದರೆ ನಂತರದ ಪೀಳಿಗೆಗಳಿಗೆ ಅದರ ಬಗ್ಗೆ ತಿಳುವಳಿಕೆ ಅಗತ್ಯ.

ನಾಡಿಗೇರರಿಗೆ ಅರವತ್ತು ತುಂಬಿದಾಗ ಅವರಿಗೊಂದು ಸನ್ಮಾನ ಸಮಾರಂಭ ಬೆಂಗಳೂರಿನ ಟೌನ್‌ಹಾಲ್ (ಅಥವಾ ರವೀಂದ್ರ ಕಲಾಕ್ಷೇತ್ರದಲ್ಲಿ) ಜರುಗಿತು. ನಾಡಿಗೇರ ದಂಪತಿಗಳು ಅ.ನ.ಕೃ. ಮತ್ತಿತರರು ವೇದಿಕೆ ಮೇಲಿದ್ದರು. ನಾಡಿಗೇರರಿಗೆ ಹಾರದ ಮೇಲೆ ಹಾರ ಬಿದ್ದವು. ಹಾರದಲ್ಲೇ ಅವರು ಮುಳುಗಿದರು ಅಂತ ಅನ್ನುವ ಹಾಗಿತ್ತು. ಸನ್ಮಾನದ ನಂತರ ಮೈಕಿನ ಮುಂದೆ ಅವರು ಬಂದರು. ಇಷ್ಟೊಂದು ಹಾರ ಹಾಕಿದೀರ ಅದರ ಬದಲು ಆಹಾರ ಹಾಕಿದ್ದರೆ - ಅಂದರು. ಅವರು ಹೇಳಿದ ಈ ಮಾತು ಕನ್ನಡದ ಯಾವುದೇ ಸಾಹಿತಿಯನ್ನು ನೋಡಿದರೂ ನನ್ನ ನೆನಪಿಗೆ ಬಂದು ಗರಿಕೆದರಿ ಕುಣಿದಾಡುತ್ತೆ. ಸಂತೃಪ್ತ ಕನ್ನಡ ಸಾಹಿತಿಗಳನ್ನು ಕಂಡಾಗ ನಾಡಿಗೇರ್ ಅಂತಹವರು ಈಗ ಬದುಕಿದ್ದು ಇಂತಹ ತೃಪ್ತ ಜೀವನ ಅನುಭವಿಸಬೇಕಿತ್ತು ಅನಿಸುತ್ತದೆ. ಒಂದೂರಿನಲ್ಲಿ ಬಡ ಮೇಷ್ಟರು ಇದ್ದರು ಎಂಬ ಹಾಗೆ ಒಂದು ಊರಿನಲ್ಲಿ ಬಡ ಕನ್ನಡ ಸಾಹಿತಿ ಇದ್ದ ಎಂಬ ಮಾತು ಭೂತ ಕಾಲವಾಗಲಿ ಅನ್ನಿಸುತ್ತೆ. ಅದೇ ಸಮಯಕ್ಕೆ ಹಾರ-ಆಹಾರದ ನೆನಪೂ ಸಹ ಮತ್ತೆ ಮತ್ತೆ ಮನಸ್ಸನ್ನು ಕದಡುತ್ತದೆ.



**THIGH**

ಮುರಿದರೆ
ತೈ-ಮೂರ!
ಕೈ
ಮುರಿದರೆ
ಕೈ-ಮೂರಾ?

ಎನ್. ಪ್ರಕಾಶ್

# ನಾಡಿಗೇರ್

(ಒಂದು ನೆನಪು)

– ಹಾ.ರಾ.

1946. 'ಜನವಾಣಿ'ಯಲ್ಲಿ ಮೊದಲ ಸಮಾಗಮ ನನಗೂ ನಾಡಿಗೇರರಿಗೂ. ಅಷ್ಟು ಹೊತ್ತಿಗೆ ನಾನು ನಾಡಿಗೇರರ 'ತಲೆಹರಟೆ','ಅಡ್ಡಾದಿಡ್ಡಿ' ಪುಸ್ತಕಗಳನ್ನು ಓದಿ ತಲೆಗೆ ಚುರುಕು ಮುಟ್ಟಿಸಿದ್ದೆ. ಚುರುಕು ತಲೆ ಹರಟೆಗೆ ಮೂಲ ಎಂಬ ಸೂತ್ರದ ಅರಿವಾಯಿತು. 'ತಲೆಹರಟೆ' ಎಂಬ ಪಟ್ಟ ನನಗೂ ಸಿಕ್ಕಿತು. ಆದರೆ ಅದನ್ನೇ ಕಲೆಯನ್ನಾಗಿ ಮಾಡಿಕೊಂಡು ಪತ್ರಿಕಾ ಕ್ಷೇತ್ರದಲ್ಲಿ ಬದುಕನ್ನು ಸಾಗಿಸುತ್ತಿದ್ದ ನಾಡಿಗೇರರ ಬಗ್ಗೆ ಅಭಿಮಾನ ಉಕ್ಕಿದ್ದು ಹೀಗೆ. ಅವರು ಸಹ ಸಂಪಾದಕರು ಅಲ್ಲ. ನನ್ನನ್ನೂ ಮತ್ತು ಇನ್ನಿಬ್ಬರನ್ನು ಉಪ ಸಂಪಾದಕರು ಎಂದು ಕರೆಯಲು ತೊಡಗಿದರು. ಉಪ ಪತ್ನಿಯ ಹಾಗೆಯೆ ಇದು ಎಂದು ನಾನು ನಾಡಿಗೇರರನ್ನು ಕೇಳಿದೆ. ಅವರು ಇಂಗ್ಲಿಷ್‌ನಲ್ಲಿ Sub-Editor ಎಂದಾಗ ಕೇಳಿ ಸಂತೋಷಪಟ್ಟೆ. ನಾನು ಅಷ್ಟಕ್ಕೇ ಬಿಡದೆ ಸಹ ಸಂಪಾದಕನಿಗೂ ಉಪ ಸಂಪಾದಕರಿಗೂ ವ್ಯತ್ಯಾಸ ಏನು ಸಾರ್? ಅಂತ ಕೇಳಿದೆ. ಸಹ ಸಂಪಾದಕನಾಗಬೇಕಾದರೆ ಸೆಣಕಲು ಕಡ್ಡಿಯಂತೆ ಅಂದರೆ ನನ್ನಂತಿರಬೇಕು, ನಿನ್ನ ಹಾಗೆ ದುಂಡು ದುಂಡಿಗಿದ್ದರೆ ಪ್ರಮೋಷನ್ ಬೇಗ ಸಿಗೊಲ್ಲ ಎಂದು ಕಡ್ಡಿ ತುಂಡು ಮಾಡಿದ ಹಾಗೆ ಹೇಳಿದರು. ಅಂದರೆ ಚೆನ್ನಾಗಿ ಕೆಲಸ ಮಾಡಿ ತಮ್ಮಂತೆ ಕೃಶ ಕಾಯನಾಗಬೇಕೆಂಬುದು ಅವತ ಮಾತಿನ ಅರ್ಥ. ನಾನು ಆಗತಾನೆ ಕೆಲಸಕ್ಕೆ ಸೇರಿದ್ದೆ ಎಂದನಲ್ಲ. ಇಂಗ್ಲಿಷ್‌ನಲ್ಲಿ ಬರುತ್ತಿದ್ದ ಪಿ.ಟಿ.ಐ. ಮತ್ತು ರಾಯಿಟರ್ ಸುದ್ದಿಗಳನ್ನು ಭಾಷಾಂತರ ಮಾಡಿ ನಾನು ಸುದ್ದಿಗಳನ್ನು ಮರು ಪರಿಶೀಲನೆಗೆ ಮಂಜಯ್ಯನವರಿಗೋ, ನಾಡಿಗೇರರಿಗೋ ಕೊಡಬೇಕಾಗಿತ್ತು. ಅವರು ಅವುಗಳನ್ನು ತಿದ್ದಿ ಕಂಪಾಜಿಟರ್ ರೂಮಿಗೆ ಕಳಿಸುವುದು ಪದ್ಧತಿ. ನಾನು ಬರೆದು ಕೊಟ್ಟಿದ್ದ ಸುದ್ದಿಗಳು ಹೆಚ್ಚಾಗಿ ಪತ್ರಿಕೆಯಲ್ಲಿ ಬರಬೇಕೆಂಬ ಆಸೆಯನ್ನು ತಾಳಿ ಸಂಜೆ 'ಫಾರಂ ಮೇಕಪ್' ಮಾಡುವಾಗ ನಾನು ಒಳಕ್ಕೆ ಹೋಗಿ ಸ್ವಲ್ಪ ಕಾಳಜಿ ವಹಿಸುತ್ತಿದ್ದೆ. ಇದರಿಂದ ಬೇರೆಯವರು ಬರೆದು ಸಿದ್ಧಮಾಡಿದ್ದ ಸುದ್ದಿಗಳು ಜಾಗವಿಲ್ಲದೆ ಹಾಗೆ ಉಳಿದು ಹೋಗುತ್ತಿತ್ತು - ಅವು ಅಷ್ಟೇನು ಮುಖ್ಯವಲ್ಲ ಎಂಬ ಕಾರಣದಿಂದ. ಇದು ಪ್ರಧಾನ ಸಂಪಾದಕರ ಕಿವಿಗೆ ಮುಟ್ಟಿತು. ಅಷ್ಟು ಹೊತ್ತಿಗೆ ನಾನು ಖಾದಿ ಜುಬ್ಬವನ್ನು ಹೊಲಿಸಿ ಬೆನ್ನಿಗೆ ಉದ್ದನೆಯ ಚೀಲವನ್ನು ತಗುಲಿಸಿಕೊಂಡು 'ಜರ್ನಲಿಸ್ಟ್' ಪಟ್ಟವನ್ನು ಸಂಪಾದಿಸಿದ್ದೆ. ಬೀದಿ ತಿರುಗುವ ಕಳೆ

ಮುಖದಲ್ಲಿ ಮಿಂಚುತ್ತಿತ್ತು. ಸಂಪಾದಕರು ನನ್ನನ್ನು ಕರೆಸಿ ನೀವು ಇನ್ನು ಮುಂದೆ ಬೇರೆ ಬೇರೆ ಊರುಗಳ ಸುದ್ದಿಗಳನ್ನು "Edit' ಮಾಡಿ ಅಂಥವನ್ನು ಮಾತ್ರ ಒಳಕ್ಕೆ ಕಳಿಸಿ ಎಂಬ ಸೂಚನೆ ಕೊಟ್ಟರು. ಅದರಂತೆ ನಾನು ಆ ಕೆಲಸವನ್ನು ತುಂಬ ಮುತುವರ್ಜಿಯಿಂದಲೇ ಮಾಡುತ್ತಿದ್ದೆ. ಒಂದು ದಿನ ಮುಳುಬಾಗಿಲು ಕರ್ನಾಟಕ ಸಂಘದ ಒಂದು ಭಾಷಣ ಕಾರ್ಯಕ್ರಮದ ವರದಿಯನ್ನು ತಿದ್ದಿ ಬರೆದು ಪ್ರಕಟಣೆಗೆ ಅಣಿ ಮಾಡಿ ಕಳಿಸಿದೆ. ಸಂಜೆ ಪತ್ರಿಕೆಯಲ್ಲಿ ''ಕಾರ್ಯದರ್ಶಿಗಳಾದ ವಿಶ್ವನಾಥಯ್ಯನವರು ಕಡೆಯಲ್ಲಿ ಎಲ್ಲರಿಗೂ ವಂದನಾರ್ಪಣೆ ಮಾಡಿದರು'' ಎಂದು ಅಚ್ಚಾಗುವ ಬದಲು ''ನಿಂದನಾರ್ಪಣೆ ಮಾಡಿದರು'' ಎಂದು ಸಣ್ಣ ತಪ್ಪು ಹಾಗೆ ಉಳಿದು ಅಚ್ಚಾಗಿಬಿಟ್ಟಿತ್ತು. ಅದನ್ನು ಓದಿ ಮೊಟ್ಟ ಮೊದಲು ಖುಷಿ ಪಟ್ಟವರೆಂದರೆ ನಾಡಿಗೇರರು! ಇದು ನನಗೆ ನೆನಪು ಬರಲು ಇನ್ನೊಂದು ಪ್ರಬಲವಾದ ಕಾರಣವಿದೆ. ಸುದ್ದಿ ಪ್ರಕಟವಾದ ಮೂರು ನಾಲ್ಕು ದಿವಸಗಳೊಳಗೆ ಮುಳುಬಾಗಿಲಿನ 'ನಾಗರೀಕ' ಎಂಬುವವರಿಂದ ನಮ್ಮ ಪತ್ರಿಕಾಲಯಕ್ಕೆ ಒಂದು ಪತ್ರ ಬಂತು. ''ನಿಮ್ಮ ಪತ್ರಿಕೆಯಲ್ಲಿ ನಮ್ಮೂರಿನ ಭಾಷಣ ಕಾರ್ಯಕ್ರಮದ ದಿವಸ ನಡೆದ ಸಂಗತಿಯನ್ನು ಸತ್ಯವಾಗಿ ಚಾಚೂ ತಪ್ಪಿಲ್ಲದಂತೆ ವರದಿಯನ್ನು ಪ್ರಕಟಿಸಿರುವ ತಮಗೆ ಧನ್ಯವಾದಗಳು ನಮಗೆಲ್ಲ ಸಂತೋಷವಾಯಿತು'' ಎಂದು ಆ ಕಾಗದದಲ್ಲಿ ಬರೆದಿದ್ದರು. ನಾಡಿಗೇರರು ನನಗೆ ಅವತ್ತು ಸಮಾಧಾನ ಹೇಳಿ 'ಇದಕ್ಕೆಲ್ಲ ತಲೆ ಕೆಡಿಸಿಕೊಳ್ಳಬಾರದು. ಪತ್ರಿಕಾ ಪ್ರಪಂಚದಲ್ಲಿ ಇವೆಲ್ಲ ಸಾಮಾನ್ಯ ಎಂದು ಹೇಳಿ ನನಗೆ ಧೈರ್ಯ ತುಂಬಿದರು. ಅಲ್ಲದೆ ಹಿಂದೆ ಆಗಿದ್ದ ಕೆಲವು ಮುದ್ರಾ ದೋಷಗಳನ್ನು ಹೇಳುತ್ತ ಎಲ್ಲರನ್ನೂ ನಗಿಸಿದರು. ''ತಾಲ್ಲೂಕು ಪಂಚಾಯಿತಿ ಅಧ್ಯಕ್ಷರು ಸಭಾ ಮಂಟಪದಲ್ಲಿ ನೆರೆದಿದ್ದವರಿಗೆಲ್ಲ ಹಾದರದ ಸ್ವಾಗತ ನೀಡಿದರು'' ಎಂದು ಪತ್ರಿಕೆಯಲ್ಲಿ ಒಮ್ಮೆ ಅಚ್ಚಾಗಿತ್ತಂತೆ! ಇನ್ನೊಮ್ಮೆ ''ರಾಯರು ಬೊಂಬಾಯಲ್ಲಿ ಆಭಾಸ ಮಾಡಿಕೊಂಡು ಈಗತಾನೆ ಊರಿಗೆ ಹಿಂತಿರುಗಿ ಬಂದಿದ್ದಾರೆ'' ಎಂದು ಅಚ್ಚಾಗಿತ್ತಂತೆ. ಮುದ್ರಾರಾಕ್ಷಸನ ಹಾವಳಿಯನ್ನು ಅವರ ಬಾಯಿಂದ ಕೇಳಿದಾಗ ನನಗೆ ನಗು ತಡೆಯಲಾಗಲಿಲ್ಲ. ಇನ್ನೊಂದು - ಮುದ್ರಾರಾಕ್ಷಸನ ಹಾವಳಿಯನ್ನು ಜ್ಞಾಪಿಸಿಕೊಂಡರೆ ಮೈ ರೋಮಾಂಚನವಾಗುತ್ತದೆ. ಓರ್ವ ಪ್ರತಿಷ್ಠಿತ ಮಹಿಳೆಗೆ ಹಣದ ದುರುಪಯೋಗದ ಆಪಾದನೆಯಲ್ಲಿ ಆರು ತಿಂಗಳು ಕಠಿಣ ಶಿಕ್ಷೆಯಾಗಿದ್ದ ಸುದ್ದಿಯನ್ನು ಸೊಗಸಾದ ಶೀರ್ಷಿಕೆ ಕೊಟ್ಟು ನಾಡಿಗೇರರು ಸುದ್ದಿಯನ್ನು ಬರೆದು ಕೊಟ್ಟಿದ್ದರು. Single ಕಾಲಂ ಹೆಡ್ಡಿಂಗ್ ಕೊಟ್ಟಿದ್ದರು ದಪ್ಪಕ್ಷರದಲ್ಲಿ. ಅದು ಕಂಪೋಸ್ ಆಗಿ 'ಗ್ಯಾಲಿ ಪ್ರೂಫ್' ತಿದ್ದುವುದಕ್ಕೆ ಬಂತು. ಕಂಪಾಜಿಟರ್ ಏನು ಮಾಡಿದ್ದ ಅಂದರೆ ಪೂರ್ತಿ 'ಹೆಡ್‌ಲೈನ್' ದಪ್ಪಕ್ಷದಲ್ಲಿ ಕಾಲಂಗೆ ಸರಿ

ಹೊಂದಿಸಲಾಗಲಿಲ್ಲವೆಂದು ಅದನ್ನು ಮೊಟಕುಮಾಡಿ ''.... ಶ್ರೀಮತಿಯವರಿಗೆ ಆರು ತಿಂಗಳು' ಎಂದು ಮಾತ್ರ ಅಕ್ಷರಗಳನ್ನು ಜೋಡಿಸಿ 'ಶಿಕ್ಷೆ' ಎನ್ನುವ ಪದವನ್ನು ಬಿಟ್ಟಿದ್ದ. ಸುದೈವದಿಂದ ಕರಡದನ್ನು ತಿದ್ದುವಾಗ ನಾವು ಗಮನಿಸಿ ಸರಿಮಾಡಿ ನಕ್ಕು ಸುಸ್ತಾದೆವು!

ಇನ್ನೊಮ್ಮೆ ಸಂಜೆ ಆರುಗಂಟೆಯಾದರೂ (ಸಂಜೆ ಪತ್ರಿಕೆ) ಮೆಷಿನ್ ಮೇಲೆ ಹೋಗಲು ಪತ್ರಿಕೆಯ ಫಾರಂ ಸಿದ್ಧವಾಗಲಿಲ್ಲ. 'ಮೇಕ್‌ಅಪ್' ಮುಗಿದು ಫಾರಂ 'ರೆಡಿ' ಮಾಡಿದಾಗ ಆರೇಳು ಅಂಗುಲದಷ್ಟು ಜಾಗ 'ಮ್ಯಾಟರ್' ಇಲ್ಲದೆ ಕಡೆ ಕಾಲಂ ಖಾಲಿ ಬಿತ್ತು. ಹೊಸದಾಗಿ ಏನನ್ನಾದರೂ ಬರೆದು ಮೊಳೆ ಜೋಡಿಸುವುದಕ್ಕೆ ಕಾಲಾವಕಾಶವಿರಲಿಲ್ಲ. ನಾಡಿಗೇರರು ತಕ್ಷಣ ಒಂದು ಉಪಾಯ ಮಾಡಿದರು. ಮೂರು ನಾಲ್ಕು ಇಂಚಿನ ಒಂದು ಹಳೆ ಬ್ಲಾಕನ್ನು ಹುಡುಕಿ ತೆಗೆದು ಚೀಫ್ ಕಂಪಾಸಿಟರ್ ಆದ ಕೃಷ್ಣರಾಜೂಗೆ ಕೊಟ್ಟು ಜೋಡಿಸಿ ಫಾರಂನ್ನು ಲಾಕ್ ಮಾಡುವಂತೆ ಹೇಳಿದರು. ಚಿತ್ರದ ಕೆಳಗೆ ಏನಾದರೂ ವಿವರಣೆ ಕೊಡಬೇಕಲ್ಲ! ''ಎರಡನೆ ಮಹಾ ಯುದ್ಧದಲ್ಲಿ ಅಲಾಸ್ಕ ಬಳಿ ಅದೃಶ್ಯವಾದ ಬಾಂಬರ್ ವಿಮಾನ'' ಎಂದು ಒಂದು ಸಾಲು ಬರೆದು ಕೊಟ್ಟರು, ಕಂಪೋಸ್ ಮಾಡಿ ಅದರಡಿ ಹಾಕಿಸಿ ಪತ್ರಿಕೆಯನ್ನು ಅಚ್ಚು ಮಾಡಿಸಿಯೆಬಿಟ್ಟರು. ಆ ಜಾಗದಲ್ಲಿ ಒಂದಿಷ್ಟು ಕಪ್ಪು ಮಸಿ ಬಳಿದಂತಾಗಿ ಮಧ್ಯೆ ಮಧ್ಯೆ ಬಿಳಿ ಚುಕ್ಕಿಗಳು ಕಾಣಿಸುತ್ತಿದ್ದವು. ವಿಮಾನವಂತೂ ಅದೃಶ್ಯವಾಗಿದ್ದುದು ನಿಜ!

ಸುದ್ದಿಗಳನ್ನು ಬರೆಯುವಾಗ ಸರಳವಾದ ಭಾಷೆಯನ್ನು ಉಪಯೋಗಿಸಬೇಕೆಂದೂ ಎಲ್ಲರಿಗೂ ಅರ್ಥವಾಗಿರುವಂತೆ ಇರಬೇಕೆಂದೂ ನಾಡಿಗೇರರು ಪದೇ ಪದೇ ಹೇಳುತ್ತಿದ್ದರು. ಒಂದು ರೈಲ್ವೆ ಅಪಘಾತದ ಸುದ್ದಿಯನ್ನು ನಾನು ಬಹಳ ಎಚ್ಚರಿಕೆಯಿಂದ ಬರೆಯಬೇಕಾಗಿತ್ತು. ಅಪಘಾತ ಅದೃಷ್ಟವಾತ್ ಆಗಿರಲಿಲ್ಲ. ಅದಕ್ಕೆ ಡ್ರೈವರನ ಎಚ್ಚರಿಕೆಯಿಂದ ಬರೆಯಬೇಕಾಗಿತ್ತು. ಅಪಘಾತ ಅದೃಷ್ಟವಶಾತ್ ಆಗಿರಲಿಲ್ಲ. ಅದಕ್ಕೆ ಡ್ರೈವರನ ಚಾಕಚಕ್ಯತೆಯೇ ಕಾರಣ ಎಂದು ಹೇಳಲಾಗಿತ್ತು. ಆ ಸುದ್ದಿಯನ್ನು ಬರೆಯುವಾಗ ನಾನು ಒಂದು ಅಚಾತುರ್ಯವನ್ನು ಮಾಡಿದ್ದೆ. ಬುದ್ಧಿವಂತಿಕೆಯನ್ನು ಉಪಯೋಗಿಸಿ, ಹೀಗೆ ಬರೆದಿದ್ದೆ: ತಪ್ಸೀಲಾಗಿ ನಡೆದುದೆಲ್ಲೆವನ್ನೂ ಬರೆದು ಕಡೆಯಲ್ಲಿ 'ಸುಲಭವಾಗಿ ಆಗಬಹುದಾಗಿದ್ದ ಒಂದು ಭಾರಿ ಅಪಘಾತ ತಪ್ಪಿದಂತಾಯ್ತು' ಎಂದು ಸೇರಿಸಿದ್ದೆ. ಅನಾಹುತವಾಗಲಿಲ್ಲವೆಂಬ ಒಂದು ರೀತಿಯ ಅಸಂತೋಷ ಪತ್ರಿಕೆಗೆ ಇದ್ದ ಹಾಗೆ ಕಾಣುತ್ತೆ ಎಂದು ಒಬ್ಬ ಮಹಾಶಯ ಒಂದು ಪತ್ರ ಬರೆದು ತಪ್ಪನ್ನು ಎತ್ತಿ ತೋರಿಸಿದ್ದ. ಇಂಥ ಸುದ್ದಿ ಸೋಜಗಗಳು ಸೃಷ್ಟಿಯಾಗುತ್ತಲೇ ಇತ್ತು.

ಹೋರಾರತ್ನ ಮ್ಹಾಪಣಕರ್ ಅವರು ಬರೆದು ಕಳಿಸುತ್ತಿದ್ದ ವಾರ ಭವಿಷ್ಯ ಪ್ರಜಾಮತಕ್ಕೆ ಒಂದೆರಡು ವಾರ ಕಾರಣಾಂತರಗಳಿಂದ ಸಕಾಲಕ್ಕೆ ಬರಲಿಲ್ಲ. ಮ್ಹಾಪಣಕರ ಅನಾರೋಗ್ಯವೇ ಅದಕ್ಕೆ ಕಾರಣ. ರಾಶಿ ಭವಿಷ್ಯವನ್ನು ಕಂಪೋಸ್ ಮಾಡಿ ಸಿದ್ದಗೊಳಿಸಿದ್ದ 'ಮ್ಯಾಟರ್' ಇದ್ದ ಗ್ಯಾಲಿಯನ್ನು ಪತ್ರಿಕಾಯಲದಲ್ಲಿ ಹಾಗೇ ಉಳಿಸಿಕೊಳ್ಳಲಾಗುತ್ತಿತ್ತು. ಭವಿಷ್ಯವನ್ನು ಓದುವುದಕ್ಕೇ ಜನಗಳು ಆಗ ಪ್ರಜಾಮತವನ್ನು ಕೊಳ್ಳುತ್ತಿದ್ದರು. ಅಷ್ಟು ಜನಪ್ರಿಯವಾದ ಕಾಲಂ ಅದು. ಸಂಪಾದಕರು ನಾಡಿಗೇರರಿಗೆ ಹೇಳಿ ಕಳಿಸಿದರು. ಐದು ನಿಮಿಷದಲ್ಲಿ ಭವಿಷ್ಯವು ಸಿದ್ಧವಾಯಿತು. ರಾಶಿಗಳ ಹೆಸರನ್ನು ಸ್ಥಾನಪಲ್ಲಟ ಮಾಡಿ ಬೇರೆ ಬೇರೆ ಫಲಗಳು ಸಿಗುವಂತೆ ಮಾಡಿದರು. ಭವಿಷ್ಯವು ಅಚ್ಚಾಯಿತು. ಮೀನ ರಾಶಿಯ ಭವಿಷ್ಯವನ್ನು ಓದಿಕೊಂಡ ಓರ್ವ ಮಹಿಳಾ ರಾಜಕಾರಣಿಯು ತನಗೆ ರಾಶಿ ಭವಿಷ್ಯದಲ್ಲಿ ಬರೆದ್ದಿಂತೆ ಎಲ್ಲಾ ಫಲಗಳೂ ಪ್ರಾಪ್ತಿಯಾಯಿತು. ಹೋರಾ ರತ್ನರಿಗೆ ನನ್ನ ನಮಸ್ಕಾರಗಳನ್ನು ತಿಳಿಸಿ ಎಂದು ಬರೆದಿದ್ದ ಒಂದು ಪತ್ರವೂ ಬಂತು.

ಒಂದು ಮಧ್ಯಾಹ್ನ ಟೀ ಕುಡಿಯುತ್ತ ನಾಡಿಗೇರರು ತಮ್ಮ ಭರತನಾಟ್ಯದ ಕಲಾವಂತಿಕೆಯನ್ನು ಪತ್ರಿಕಾಲಯದ ಸಹೋದ್ಯೋಗಿಗಳ ಮುಂದೆ ಪ್ರದರ್ಶಿಸಿ ಎಲ್ಲರನ್ನೂ ದಂಗುಬಡಿದಿರು. ಇದು ಹೆಚ್ಚು ಜನರಿಗೆ ಗೊತ್ತಿರಲಾರದು. ಅವತ್ತು ಅವರು ಒಂದು ಆಯುಷ್ಕರ್ಮ ಶಾಲೆಯಲ್ಲಿ ಒಬ್ಬ ನಾಯಿಂದ ತನ್ನ ಗಿರಾಕಿಯನ್ನು ಹೇಗೆ ಸ್ವಾಗತಿಸಿ ಕುರ್ಚಿ ಮೇಲೆ ಕೂರಿಸುತ್ತಾನೆ, ಕ್ಷೌರ ಮಾಡಲು ಏನೆಲ್ಲ ಸಿದ್ಧತೆಗಳನ್ನು ಮಾಡಿಕೊಳ್ಳುತ್ತಾನೆ, ಕತ್ತಿಯನ್ನು ಹೇಗೆ ಮಸೆಯುತ್ತಾನೆ, ಬ್ರಷ್‌ನಿಂದ ಗಲ್ಲವನ್ನು ಹೇಗೆ ಸೋಪ್‌ಹಾಕಿ ತಿಕ್ಕುತ್ತಾನೆ, ಹಜಾಮತಿಯನ್ನು ಹೇಗೆ ಹಂತ ಹಂತವಾಗಿ ಮುಂದುವರೆಸುತ್ತಾನೆ. ಎಂಬುದನ್ನೆಲ್ಲ ಹರಟುತ್ತ; ಭರತ ನಾಟ್ಯದ ಭಂಗಿಗಳಲ್ಲಿ ತೋರಿಸುತ್ತ ಹೊಟ್ಟೆ ಹುಣ್ಣಾಗುವಂತೆ ಎಲ್ಲರನ್ನೂ ನಗಿಸಿದರು. ಅದೆಷ್ಟು ಗಾಂಭೀರ್ಯದಿಂದ ಇಡೀ ಹಾಸ್ಯ ಸನ್ನಿವೇಶವನ್ನು ನಟಿಸಿ ತೋರಿಸಿದರೋ ಅದನ್ನು ನೋಡಿ ಸಂತೋಷ ಪಟ್ಟರಿಗೇ ಗೊತ್ತು! ಹಾಸ್ಯ ಪ್ರವೃತ್ತಿಯನ್ನು ಸ್ವಾಭಾವಿಕವಾಗಿ ಬೆಳೆಸಿಕೊಂಡಿದ್ದ ಹಿರಿಮೆ ನಾಡಿಗೇರರದು. ಅನುಭವವೇ ಅವರ ಹಾಸ್ಯದ ಮೂಲ.

ಒಂದು ದಿನ ಕೈಲಿ ಗಡಿಯಾರ ರಲಿಲ್ಲ. 'ಎಲ್ಲಿ ಸಾರ್, ಗಡಿಯಾರ' ಎಂದು ಕೇಳಿದೆ. 'ಮಾರ್ವಾಡಿ ಅಂಗಡಿಯಲ್ಲಿದೆ' ಎಂದರು. 'ಬಿಡಿಸಿಕೊಳ್ಳಬಹುದಲ್ಲ' ಎಂದೆ ನಾನು. 'ಅಯ್ಯೋ ಹಾಳಾದ್ದು ಆ ಹಳೆ ಗಡಿಯಾರ ಯಾಕೆ? ಅಷ್ಟು ದುಡ್ಡಿಗೆ ಈಗ ಹೊಸದನ್ನೇ ಕೊಳ್ಳಬಹುದು' ಎಂದರು.

ಪತ್ರಿಕಾಲಯದ ಕಸದ ಬುಟ್ಟಿಗೆ ತುಂಬಾ ಮಹತ್ವವಿದೆ. ನಮ್ಮ ಟೇಬಲ್‌ಗಳ ಕೆಳಗೆ ಒಂದೊಂದು ಕಸದ ಬುಟ್ಟಿ ಇದ್ದರೂ ನಾಡಿಗೇರರ ಟೇಬಲ್ ಕೆಳಗೆ ಇಟ್ಟಿದ್ದ ಕಸದ ಬುಟ್ಟಿಗೆ ವಿಶೇಷ ಅರ್ಥವಿತ್ತು. ಕಸದ ಬುಟ್ಟಿ ಎಂದರೆ ಅವರಿಗೆ ಪ್ರಾಣ. ಕಸದ ಬುಟ್ಟಿಯನ್ನು ಹೆಚ್ಚು ಹೆಚ್ಚು ಉಪಯೋಗಿಸುತ್ತಿದ್ದ ಪತ್ರಕರ್ತರಲ್ಲಿ ನಾಡಿಗೇರರು ಅಗ್ರಗಣ್ಯರು. ಯಾತಕ್ಕೆಂದರೆ ಅವರು ಕಸದ ಬುಟ್ಟಿಯನ್ನು ಎಷ್ಟು ಬೇಗ ತುಂಬುತ್ತಿದ್ದರೋ ಅಷ್ಟೇ ಬೇಗ ಅದನ್ನು ಖಾಲಿ ಮಾಡುತ್ತಿದ್ದರು. ಅಂದರೆ? ಕಸದ ಬುಟ್ಟಿಗೆ ಹಾಕಿದ್ದ ಅಷ್ಟೋ ಇಷ್ಟೋ ಲೇಖನಗಳನ್ನೂ ಪತ್ರಗಳನ್ನೂ ಮತ್ತೆ ಎತ್ತಿಕೊಂಡು ಟೇಬಲ್ ಮೇಲೋ, ಡ್ರಾಯರ್ ಒಳಗೋ ಜೋಡಿಸಿಟ್ಟುಕೊಳ್ಳುತ್ತಿದ್ದರು. 'ಯಾಕೆ ಹೀಗೆ ಮಾಡುತ್ತೀರ?' ಎಂದು ಕೇಳಿದ್ದಕ್ಕೆ ಅವರ ಬಾಯಿಂದ ಬಂದ ಉತ್ತರ: 'ಕಸದಿಂದಲೇ ರಸ! ಹಾಸ್ಯ ಸಾಹಿತಿಯಾದವನು ಕಸವನ್ನು ನಿರ್ಲಕ್ಷಿಸಬಾರದು. ಅದನ್ನೇ ಸಮಾಜಕ್ಕೆ ತೋರಿಸಬೇಕು' ಎಂದರು ಸೂತ್ರ ಸರಳವಾಗಿ ಕಂಡರೂ ಅಪಾರವಾದ ನೋವು ನಲಿವುಗಳ ಹಿನ್ನೆಲೆ ಆ ಮಾತಿಗಿದೆ ಎಂದೆನಿಸಿತು ನನಗೆ.

ನಾನು ಜನವಾಣಿಗೆ ಸೇರಿದಾಗ ನನಗೆ ಮದುವೆಯಾಗಿರಲಿಲ್ಲ. ನಾಡಿಗೇರರನ್ನು ಕೇಳಿದೆ: ''ಮನೆಯಲ್ಲಿ ಒತ್ತಾಯ ಜಾಸ್ತಿಯಾಗುತ್ತಿದೆ. ಮಾಡಿಕೊಂಡರೆ ಒಳ್ಳೆಯದೆ? ಬ್ಯಾಡ ಎಂದರೆ ಒಳ್ಳೆಯದೆ?'' ಎಂದು. ಎರಡರಲ್ಲೂ ಕಷ್ಟ ತಪ್ಪದು ಎಂದರು ಒಂದು ಮಾತಿನಲ್ಲಿ. ''ನನ್ನ ಕೆಲಸ - ಸಂಬಳ ಯಾವುದನ್ನೂ ಹೆಣ್ಣಿನ ಮನೆಯವರಿಗೆ ಹೇಳಿಲ್ಲ, ಆದರೂ ಈ ಮದುವೆ ನಿಷ್ಪರ್ಷೆಯಾಗಿದೆ ಸಾರ್'' ಎಂದೆ. ''ಲಗ್ನಪತ್ರಿಕೆ ಪ್ರಿಂಟ್ ಮಾಡಿಸಬೇಕು ಸಾರ್. ನನಗೊಂದು ಆಸೆ ಇದೆ. ನನ್ನ ಹೆಸರಿನ ಕೆಳಗೆ "Sub-Editor' ಅಂತ ಹಾಕಿಕೊಳ್ಳಲೆ'' ಎಂದು ಕೇಳಿದೆ. ನಾಡಿಗೇರರ ಬಾಯಿಂದ ಚಿಮ್ಮಿತು ಉತ್ತರ. ''ಹಾಗೆಲ್ಲಾದರೂ ಮಾಡೀಯ ಮದುವೆ ನಿಂತುಹೋದೀತು - ಜೋಕೆ?'' ಎಂದು ಎಚ್ಚರಿಸಿದರು. (ಕಾಲ ಹಾಗಿತ್ತು, ಆಗ)

ನಾಡಿಗೇರರ ಹಾಸ್ಯದ ರೀತಿ ನೀತಿಗಳನ್ನು ನಾನು ಆಗತಾನೆ ಗುರ್ತಿಸಿಕೊಳ್ಳುತ್ತಿದ್ದೆ. ವೃತ್ತಿ ಕ್ಷೇತ್ರದಲ್ಲಿ ಹಿರಿಯರೊಬ್ಬರು ಕಿರಿಯನನ್ನು ಹೇಗೆ ನಡೆಸಿಕೊಂಡರು, ಹೊಟ್ಟೆ ತುಂಬಿಸಿಕೊಳ್ಳುವಷ್ಟು ಹಣ ಸಿಗದಿದ್ದರೂ ವೃತ್ತಿಯನ್ನು ಎಷ್ಟು ಧೈರ್ಯವಾಗಿ ಎದುರಿಸುತ್ತಿದ್ದರು ಎಂಬ ಅಂಶ ನನ್ನ ಗಮನಕ್ಕೆ ಬಂದಿತ್ತು. ಹಾಸ್ಯ ಪ್ರವೃತ್ತಿ ಅಥವಾ ಮನೋಭಾವವೇ ಇವರ ಗುಟ್ಟು ಎಂಬುದನ್ನು ಅರಿವು ಮಾಡಿಕೊಟ್ಟರು. ಒಂದು ದಿನ ಪೇಪರ್ ಆಫೀಸಿಗೆ ಒಬ್ಬ ಶ್ರೀಮಂತ ಬಂದ.

ಕೆಲಸಕ್ಕೆ ಬಾರದ ಒಂದು ಸುದ್ದಿಯನ್ನು ಪತ್ರಿಕೆಯಲ್ಲಿ ಹಾಕಬೇಕೆಂದು ಒತ್ತಾಯ ಮಾಡಿದ. ನಾಡಿಗೇರರ ಬಳಿಗೇ ಬರಬೇಕೆ ಅವನು? ಅಂತೂ ಅವನು ನಿರ್ಗಮಿಸಿದ ನಂತರ ಆ ಶ್ರೀಮಂತನ ತಲೆಯ ವಿಚಾರ ಚರ್ಚೆಯ ವಿಷಯವಾಯಿತು. ಅದು ಕೆಟ್ಟಿದೆಯೆ? ಸರಿಯಾಗಿದೆಯೆ? ಎಂಬುದೇ ಜಿಜ್ಞಾಸೆ. 'ತಲೆ ಸರಿಯಾಗಿ ಇತ್ತಲ್ಲ ಸಾರ್' ಎಂದು ಯಾರೋ ಹೇಳಿದರು. ಅದನ್ನು ಅಷ್ಟು ಖಚಿತವಾಗಿ ಹೇಳಲು ಸಾಧ್ಯವಿಲ್ಲ; ಬೇಕಾದರೆ ಪರೀಕ್ಷಿಸಿ ಎಂದು ಹೇಳುತ್ತ ನಾಡಿಗೇರರು ಒಂದು ತೆಂಗಿನ ಕಾಯನ್ನು ಕೈಗೆ ಕೊಟ್ಟು (ಯಾವುದೋ ಮದುವೆ ಮನೆಗೆ ಹೋಗಿದ್ದ ಅವರು ಕೈಲಿ ಒಂದು ತೆಂಗಿನ ಕಾಯಿ ಹಿಡಿದುಕೊಂಡು ಬಂದಿದ್ದರು ಅವತ್ತು) ಅಲ್ಲಾಡಿಸಿ ನೋಡು ಎಂದರು. ಹಾಗೆ ಮಾಡಿದಾಗ ಅದರೊಳಗಿಂದ ಸುಶ್ರಾವ್ಯದ ಧ್ವನಿ ಹೊರಡಲಿಲ್ಲ. ಕಾಯಿ ಕೆಟ್ಟಿದೆ ಎಂಬುದು ಅರಿವಾಯಿತು. ಆ ಶ್ರೀಮಂತನ ತಲೆಯೂ ಇದರಂತೆ ಕೆಟ್ಟಿದೆ ಎಂದು ತೀರ್ಮಾನ ಮಾಡಿಬಿಟ್ಟರು! ತಲೆಯನ್ನು ಅಲ್ಲಾಡಿಸಿ ನೋಡಿ ಅದು ಆರೋಗ್ಯವಾಗಿದೆಯೆ? ಅಥವ ಇಲ್ಲವೆ? ಎಂಬುದನ್ನು ಪತ್ರಿಕೋದ್ಯೋಗಿಯಾದ ಅವರು ಬೇಗ ಗ್ರಹಿಸುತ್ತಿದ್ದರು. ನನ್ನ ತಲೆಯ ಬಗ್ಗೆ ನಾನು ಯಾವತ್ತು ವಿಶ್ವಾಸವನ್ನು ಬೆಳೆಸಿಕೊಂಡವನಲ್ಲ! ಇದರಿಂದ ನನಗೆ ಎಷ್ಟೋ ವರ್ಷಗಳ ನಂತರ ಪ್ರಯೋಜನ ಕಂಡು ಬಂತು. ನಾನು ಪ್ರಕಟಿಸಿದ ಒಂದು ಹಾಸ್ಯ ಬರಹಗಳ ಸಂಕಲನಕ್ಕೆ 'ಯಾರಿಗೆ ತಲೆ ಸರಿಯಾಗಿದೆ' ಎಂಬ ಹೆಸರೇ ಸೂಕ್ತವೆಂಬ ತೀರ್ಮಾನಕ್ಕೆ ಬಂದೆ! ಬೆಳೆಯುವ ಗಿಡದ ಗುಣವನ್ನು ಮೊಳಕೆಯಲ್ಲೇ ಕಾಣಬಹುದೆಂದು ನಾಡಿಗೇರರು ಆಗಾಗ್ಗೆ ಹೇಳುತ್ತಿದ್ದರು.

ಮುಖ್ಯ ಪ್ರಾಣಭವನದ ಅಡಿಗೆಯವನನ್ನು ನಾಡಿಗೇರರು ಒಂದು ಮಧ್ಯಾಹ್ನ 'ಇಂಟರ್‌ವ್ಯೂ' ಮಾಡಿದರು. ನಾಡಿಗೇರರ ಮೊದಲ ಪ್ರಶ್ನೆ ಅವನಿಗೆ, 'ನೀನ್ಯಾಕೆ ಹಗಲು ಹೊತ್ತಿನಲ್ಲಿ ಹೊರಗೆ ಕಾಣಿಸಿಕೊಳ್ಳುವುದಿಲ್ಲ?' ಅದಕ್ಕೆ ಆ ಬಾಣಸಿಗ ಕೊಟ್ಟ ಉತ್ತರ: ''ಅಪ್ಪಿ ತಪ್ಪಿ ನಾನೇನಾದರೂ ಹೊರಗೆ ಕಾಣಿಸಿಕೊಂಡರೆ ಬೋರ್ಡರುಗಳು ನನ್ನನ್ನು ಸಾಯಿಸದೆ ಬಿಟ್ಟಾರೆಯೆ? ಹೊರಗೆ ಎಲ್ಲಾದರೂ ಸಿಕ್ಕಿಬಿದ್ದಾನು ಎಂಬ ಭಯದಿಂದ ಮಾಲೀಕರು ಅಡಿಗೆ ಮನೆಗೆ ಬೀಗ ಹಾಕಿ ಇಟ್ಟುಕೊಂಡಿರುತ್ತಾರೆ. ನಾನು ಒಳಗೆ ಬೇಯಿಸುತ್ತ ಇರುತ್ತೇನೆ'' ಎಂದ! ಇಂಥ ಸಂದರ್ಶನಗಳನ್ನು ನಾಡಿಗೇರರು ರಸವತ್ತಾಗಿ ಬರೆದು ಭಾನುವಾರದ ಸಂಚಿಕೆಗಳಲ್ಲಿ ಪ್ರಕಟಿಸುತ್ತಿದ್ದರು. ಇದ್ದಕ್ಕಿದ್ದ ಹಾಗೆ ಒಂದು ದಿನ ನಾಡಿಗೇರರು ಊಟ ಮಾಡಿಕೊಂಡು ರಭಸದಿಂದ ಪೇಪರಾಫೀಸಿಗೆ ಬಂದರು. ""I ate non vegetarian food today" ಎಂದರು. 'ಕಡೆಗಾಲಕ್ಕೆ ಶ್ಯಾಮಾಚಾರಿ ಮೀನು

ತಿಂದು ಸತ್ತ' ಎನ್ನುವ ಗಾದೆ ನನಗೆ ಜ್ಞಾಪಕಕ್ಕೆ ಬಂತು. ನಾಡಿಗೇರರಿಗೆ ಯಾಕೆ ಈ ಚಪಲ ಅಂಟಿಕೊಂಡಿತು ಎಂದು ನಾನು ಯೋಚಿಸುತ್ತಿದ್ದಾಗ 'ಇವತ್ತು Ladies fingers ಹುಳಿ ಮನೇಲಿ' ಎಂದರು!

ನಮ್ಮ ಪತ್ರಿಕೆಯಲ್ಲಿ ವಾರದ ಅಡಿಗೆ ಕಾಲಂನ್ನು ತುಂಬುತಿದ್ದವರೂ ನಾಡಿಗೇರರೇ ಆ ಕಾಲದಲ್ಲಿ ಮಹಿಳೆಯರು ಹೊಸ ರುಚಿಗಳನ್ನು ಕಂಡು ಹಿಡಿದು ಪತ್ರಿಕೆಗಳ ಮೂಲಕ ಜನಕ್ಕೆ ಹಂಚುತ್ತಿರಲಿಲ್ಲ! ಮನೆಯಲ್ಲಿ ಹೊಸ ಪಾಕ ವಿಧಾನಗಳ ಪ್ರಯೋಗಗಳನ್ನು ಮಾಡಲು ಗೃಹಿಣಿಯರು ಹೆಚ್ಚು ಆಸಕ್ತಿ ವಹಿಸುತ್ತಿರಲಿಲ್ಲವಾದುದರಿಂದ ನಮ್ಮಂಥವರು ಪತ್ರಿಕೆಗಳ ಮುಖಾಂತರವೇ ಪ್ರಚಾರ ಮಾಡಿ ನಾಲಿಗೆಯ ತೀಟೆಯನ್ನು ತೀರಿಸಿಕೊಳ್ಳಬೇಕಾಗಿತ್ತು. ಒಮ್ಮೆ ಕುಂಬಳ ಕಾಯಿ ಹಲ್ವ ವೆಂಬ ಹೊಸ ರುಚಿಯನ್ನು ಸೃಷ್ಟಿಸಿ ತಿಂಗಳ ವಿಶೇಷ ಎಂದು ಪತ್ರಿಕೆಯ ಅಡಿಗೆ ಕಾಲಂನಲ್ಲಿ ಪ್ರಕಟಿಸಿದರು. ಅದು ಕರ್ನಾಟಕಾಂಬೆಯ ಸಂಸಾರದಲ್ಲಿ ಒಂದು ಕ್ರಾಂತಿಯನ್ನೇ ಎಬ್ಬಿಸಿತು! ಹಲ್ವವೆಂಬ ಆ ಖಾದ್ಯವನ್ನು ತಯಾರು ಮಾಡುವ ವಿಧಾನ ಹೀಗಿತ್ತು. ಬೇಕಾಗುವ ಪದಾರ್ಥಗಳು: 1 ಸೇರು ಬೆಣ್ಣೆ (ಮಂಡ್ಯದ್ದು) ಕಾಯಿಸಿದ ತುಪ್ಪ, ಅರ್ಧ ಪಾವು ಸಕ್ಕರೆ, 25 ತೊಲ ದ್ರಾಕ್ಷಿ, 25 ತೊಲ ಗೋಡಂಬಿ, ಎರಡು ಗುಲಗಂಜಿ ತೂಕದಷ್ಟು ಕುಂಕುಮ ಕೇಸರಿ, ಅರ್ಧಸೇರು ಸಣ್ಣ ರವೆ, ಅಚ್ಚೇರು ಹಸುವಿನ ಹಾಲು, ಒಂದು ಸಣ್ಣ ಸೀಗುಂಬಳಕಾಯಿ.

ಮಾಡುವ ವಿಧಾನ: ರವೆಯನ್ನು ತುಪ್ಪದಲ್ಲಿ ನಿಧಾನವಾಗಿ ಹುರಿದು, ನೀರು, ಸಕ್ಕರೆ ಹಸುವಿನ ಹಾಲನ್ನು ಬಾಣಲಿಗೆ ಸುರಿದು ಸಣ್ಣ ಉರಿಯಲ್ಲಿ ಕುದಿಸತಕ್ಕದ್ದು. ದ್ರಾಕ್ಷಿ, ಹುರಿದ ಗೋಡಂಬಿಗಳನ್ನು ಅದರ ಮೇಲೆ ಬಿಡಿ ಬಿಡಿಯಾಗಿ ಹಾಕುತ್ತ ಯಾಲಕ್ಕಿಪುಡಿ, ಕುಂಕುಮ ಕೇಸರಿಗಳನ್ನು ಬರೆಸಿ ಬೆಣ್ಣೆ ಕಾಯಿಸಿದ ತುಪ್ಪವನ್ನು ಮುಖ ನೋಡದೆ ಅದಕ್ಕೆ ಸುರಿದು ಸೌಟಿನಿಂದ ನಿಧಾನವಾಗಿ ಗೋಟಾಯಿಸಬೇಕು. ಹಲ್ವವು ಒಂದು ಹದಕ್ಕೆ ಬಂದ ತಕ್ಷಣ ತುರಿದಿಟ್ಟುಕೊಂಡಿದ್ದ ಕುಂಬಳ ಕಾಯಿ ತುರಿಯನ್ನು ಕಿಟಕಿ ಆಚೆ ಬಿಸಾಡಿ ಬಾಣಲಿಯನ್ನು ಕೆಳಕ್ಕಿಳಿಸಬೇಕು. 'ಕುಂಬಳಕಾಯಿ ಹಲ್ವ' ತಯಾರ್! ಈ ಹೊಸ ರುಚಿಗೆ ಪ್ರತಿಕ್ರಯಿಸಿ, ಹಲವಾರು ಗೃಹಸ್ಥರು ಪ್ರತಿಭಟನಾ ಪತ್ರಗಳನ್ನು ಸಂಪಾದಕರಿಗೆ ಬರೆದರು. ಮುಂದಿನ ವಾರದಿಂದ ಸಂಪಾದಕ ವರ್ಗದವರು ಹೊಸ ರುಚಿಗಳನ್ನು ಬರೆದು ಪ್ರಕಟಿಸಬಾರದೆಂದೂ ವಾಚಕರಿಂದಲೇ ಹೊಸ ಅಡಿಗೆ ವಿಧಾನಗಳನ್ನು ಆಹ್ವಾನಿಸಬೇಕೆಂದೂ ವ್ಯವಸ್ಥಾಪಕರಿಂದ ಆದೇಶ ಬಂತು. ನಾಡಿಗೇರರಿಂದ ಪ್ರಾರಂಭವಾದ 'ಹೊಸ ರುಚಿ ಕಾಲಂ' ಕೆಲವು ವಾರಗಳಲ್ಲೇ ನಿಂತು ಹೋಯಿತು!

ನಮ್ಮ ಪತ್ರಿಕಾ ಕಛೇರಿಯಲ್ಲಿ ಕಾಲ ಹೋಗುತ್ತಿದ್ದುದೇ ಗೊತ್ತಾಗುತ್ತಿರಲಿಲ್ಲ. ನಾಡಿಗೇರರ ಮೃದು ಹಾಸ್ಯದ ಸವಿಯನ್ನು ನಾನು ಸಾಕಷ್ಟು ಸವಿದಿದ್ದೇನೆ. ಮಾತಿಗೆ ಮಾತು ಮಥಿಸಿದಾಗ ಹುಟ್ಟುವ ಹಾಸ್ಯದ ಪರಿಯನ್ನರಿಯಬೇಕಾದರೆ ನಾಡಿಗೇರರೊಂದಿಗೆ ಮಾತಿಗೆ ಇಳಿಯಬೇಕಾಗಿತ್ತು. ನಾಡಿಗೇರರು ತಮ್ಮ ಚಪ್ಪಲಿಗಳನ್ನು ಎಲ್ಲೂ ಬಿಡುತ್ತಿರಲಿಲ್ಲ. ನಾವು ಒಂದೊಂದು ಜೊತೆ ಚಪ್ಪಲಿಗಳನ್ನು ಒಮ್ಮೆ ಒಟ್ಟಿಗೆ ಕೊಂಡಿದ್ದೆವು. ಬಣ್ಣ, ನಂಬರು ಬೇರೆ ಬೇರೆ! ಒಂದೆರಡು ವರ್ಷದ ನಂತರ ಮಾತು ಚಪ್ಪಲಿ ಕಡೆ ಹೊರಳಿತು. ನಾಡಿಗೇರರ ಚಪ್ಪಲಿ ಸವೆದು ತುಂಬ ಹಳೆಯದಾಗಿತ್ತು. ಹೊಸದರಂತೆ ಕಂಡ ನನ್ನ ಚಪ್ಪಲಿಗಳನ್ನು ನೋಡುತ್ತ ಅವರು ''ನೀನು ಒಂದು ಸಲವೂ ರಿಪೇರಿ ಮಾಡಿಸಲಿಲ್ಲವೆ?'' ಎಂದು ಕೇಳಿದರು. ನಾನು ಈಗಾಗಲೇ ಎರಡು ಸಲ ಬದಲಾಯಿಸಿದೆ' ಎಂದು ಇದ್ದ ಸಂಗತಿಯನ್ನು ಮುಚ್ಚುಮರೆಯಿಲ್ಲದೆ ಹೇಳಿದೆ. ನಾಡಿಗೇರರಿಗೆ ಅರ್ಥವಾಯಿತು. ''ಮುಂದೆ ನೀನು ನನ್ನನ್ನು ಮೀರಿಸುತ್ತೀಯ'' ಎಂದರು!

ಅಂತೂ ಪತ್ರಿಕಾ ವೃತ್ತಿಯನ್ನು ನನಗೆ ಕಲಿಸಿದ ಗುರು ನಾಡಿಗೇರ್. ನನ್ನ ಅವರ ಒಡನಾಟ ಕೆಲವೇ ವರ್ಷ. ಸೀಮಿತವಾಗಿದ್ದ ಅವರ ಸಾನ್ನಿಧ್ಯವನ್ನು ನಾನು ಮರೆತಿಲ್ಲ. ಹೇಗೋ ಬಂದು ಹೇಗೋ ಹೊರಟುಹೋದೆ! ಪತ್ರಿಕಾವೃತ್ತಿಗೆ ನಮಸ್ಕಾರ ಹಾಕಿ ಓದನ್ನು ಮುಂದುವರೆಸಿದೆ. ಮುಂದೆ ನನ್ನ ವೃತ್ತಿ ಕ್ಷೇತ್ರ ಬೇರೆ ಆಯಿತು. ಅವರು ಮಲ್ಲಿಗೆಗೆ ಬಂದಾಗ ನಾಲ್ಕೈದು ಬಾರಿ ಹೋಗಿ ನೋಡಿದ್ದೆ. ನನ್ನ ಲೇಖನಗಳನ್ನೂ ಅವರು ಮಲ್ಲಿಗೆಯಲ್ಲಿ ಪ್ರಕಟಿಸಿದರು.

ನಾಡಿಗೇರರು ಹುಟ್ಟಿದ್ದು ಸುದ್ದಿಯಾಗಲಿಲ್ಲ. ಅವರು ಚಿನ್ನದ ಚಮಚವನ್ನು ಬಾಯಲ್ಲಿಟ್ಟುಕೊಂಡೂ ಹುಟ್ಟಲಿಲ್ಲ. ಆದರೆ ಅವರು ನಿಧನವಾದದ್ದು ದೊಡ್ಡ ಸುದ್ದಿಯಾಯಿತು! ಬದುಕಿದ್ದಾಗಲೇ ನಿಧನ ಸುದ್ದಿಯನ್ನು ಮಾಡಿದ್ದು ನಾಡಿಗೇರರೇ! ಆದುದರಿಂದಲೇ ಹಾಸ್ಯ ಸಾಹಿತಿಗೆ ಸಿಗಬೇಕಾದ ಗೌರವ ಪ್ರಶಂಸೆ ಅವರಿಗೆ ಬೇಗ ಸಿಗುವಂತಾಯಿತು! ನಾಡಿಗೇರರು ಅದೃಷ್ಟಶಾಲಿಗಳು. ಅದೆಲ್ಲವನ್ನೂ ಅವರು ನೋಡುವಂತಾಯಿತು - ಅವರು ತಾತ್ಕಾಲಿಕವಾಗಿ ಅಂದು ನಿಧನರಾದುದರಿಂದ! ಹಾಸ್ಯ ಸಾಹಿತಿಗೂ ನನ್ಮಾನ ಈ ಶತಮಾನದ ಒಂದು ಅಚ್ಚರಿ ನಮ್ಮಲ್ಲಿ!

ದೇವರ ಮನೆ ಮೂಲೆಯಲ್ಲಿ ನನ್ನ ತಾಯಿ ಒಂದು ಸಣ್ಣ ಮಡಿ ಕೋಲನ್ನು ವರಗಿಸಿ ಇಟ್ಟಿರುತ್ತಾರೆ. ದೇವರಿಗೆ ನಮಸ್ಕಾರ ಮಾಡುವಾಗಲೆಲ್ಲ ಆ ಮಡಿ ಕೋಲು ದೃಷ್ಟಿಗೆ ಬೀಳುತ್ತದೆ. ನಾಡಿಗೇರರ ನೆನಪು ಬರುತ್ತದೆ ನನಗೆ!

★★★

# ನಿದ್ರೆ ಚೆನ್ನಾಗಿ ಬರುತ್ಯೆ?

– ಸೀ.ಆರ್. ಸತ್ಯ

ನನಗೆ ಕೆಲಸದಿಂದ ರಿಟೈರ್ಡ್ ಆದಮೇಲೆ ಮೊದಲನೇ ಸಲ ನನ್ನ ಫ್ಯಾಮಿಲಿ ಡಾಕ್ಟರ ಹತ್ತಿರ ನಾನು ಕನ್‌ಸಲ್ಟೇಷನ್‌ಗೆ ಅಂತ ಹೋಗಿದ್ದು, ಆಗ ಹೆಚ್ಚುಕಮ್ಮಿ ನಮ್ಮ ವ್ಯವಹಾರ ಕೆಳಗಿನ ರೀತೀಲಿ ನಡೀತು:

"ಏನ್ರೀ, ಏನು ನಿಮ್ಮ ಹೊಸಾ ಪ್ರಾಬ್ಲಮ್ಮು?"

"ಯಾಕೋ ಈಚೀಚೆಗೆ..."

"ನಿಮ್ಮ ಹಳೇ ಇಮ್ಯಾಜಿನರಿ ಕಂಪ್ಲೇಟ್ಸ್ ಲಿಸ್ಟ್ ನನ್ನ ಹತ್ತಿರ ಇದೆ. ಅದರಲ್ಲಿರೋ ಐಟಮ್ಸ್ ಬಿಟ್ಟು ಇನ್ನೇನಾದರೂ ಹೊಸದಿದ್ದರೆ ಹೇಳಿ, ಇಲ್ಲಾ ಅಂದರೆ, ಇವತ್ತು ಯಾಕೋ ಏನೋ ಪೇಷೆಂಟ್ಸು ತುಂಬಾ ಇದಾರೆ..."

"No, No, ಡಾಕ್ಟ್ರೇ! ಇದು ಬ್ರಾಂಡ್ ನ್ಯೂ ಕಂಪ್ಲೇಂಟು"

"ಸರಿ, ಏನು ಹೇಳಿ"

"ಈಚೀಚೆಗೆ ನಿದ್ರೆ ಸರಿಯಾಗಿ ಬರ್ತಾ ಇಲ್ಲ ಡಾಕ್ಟ್ರೆ...."

"ಅಲ್ರೀ, ಈಗಿನ ಕಾಲದಲ್ಲಿ ನಿದ್ರೆ ಯಾರ್ಗೂನೂ ಬರೋಲ್ಲ, ಎರಡು ತಿಂಗಳಿನ ಮಗೂ ಕೂಡ ಕೌನ್ ಬನೇಗಾ ಕ್ರೋರ್‌ಪತೀ ಅಂತ ಎದ್ದು ಕೂತಿರೋ ಸಂವತ್ಸರ ಇದು. ನೀವು ನಿದ್ರೆ ಮಾಡಿ ಏನು ಕಡೀಬೇಕು ಅಂತ ಇದೀರಾ?"

"ಹಾಗಲ್ಲಾ ಡಾಕ್ಟ್ರೇ, ಕೋಪಿಸ್ಕೋಬೇಡಿ. ನಾನು ಇಷ್ಟು ವರ್ಷ ಊಟ ತಿಂಡಿ ವಿಷಯದಲ್ಲಿ, ನಿದ್ರೆ ಮಾಡೋ ವಿಷಯದಲ್ಲಿ ನಿಮಗೆ ಯಾವತ್ತಾದರೂ ತೊಂದರೆ ಕೊಟ್ಟಿದ್ದೀನ್ಯೆ? ಒಳ್ಳೆ ಎಮ್ಮೆ ತರಹ ಜೀವನ ನಡೆಸಿದೀನಿ."

"ಅದು ನನಗೆ ಗೊತ್ತಿಲ್ಲವೆ?"

"ಅದಕ್ಕೇ ಡಾಕ್ಟ್ರೆ ನನಗೀಗ worry ಆಗಿರೋದು. ಅನಾಯಾಸವಾಗಿ ದಿನಕ್ಕೆ ಎರಡು ಹೊತ್ತು ತಿಂಡಿ, ಎರಡು ಪುಷ್ಕಳವಾದ ಊಟಗಳು ದೇಹದೊಳಗೆ ಹೋಗಿ ಮಾಯವಾಗುತ್ವೆ, ಆದರೆ ಅದಕ್ಕೆ ತಕ್ಕಹಾಗೆ 'ಬ್ಯಾಲಂನ್ಸಿಂಗ್' ಅಂತಾರಲ್ಲಾ, ಹಾಗೇ, ನಿದ್ದೆ ಕಮ್ಮಿ ಆಗಿಬಿಟ್ಟರೆ ನಂದು ಏನು ಗತೀ ಅಂತ..."

"ಸರಿ, ಇಲ್ಲಿ ಬಂದು ಮಲಗಿ ಎಕ್ಸಾಮಿನ್ ಮಾಡ್ತೀನಿ"

ಎಕ್ಸಾಮಿನೇಶನ್ ಮಾಡಿಸ್ಕೊಂಡೆ. ಎರಡು ತರಹ ಮಾತ್ರೆಗಳನ್ನು ಬರೆದುಕೊಟ್ರು. ಪುಣ್ಯಾತ್ಮ, ನನ್ನ ಫ್ಯಾಮಿಲಿ ಡಾಕ್ಟ್ರು ಆಗಿರೋದರಿಂದ ನನ್ನ ತರಹ ಪೇಷೆಂಟ್ಸ್ ಬಂದರೂ ಆತನಿಗೆ ತುಂಬಾ ಪೇಶೆನ್ಸೂ! "ಇನ್ನೊಂದು ಹದಿನೈದು ದಿವಸಗಳು ಬಿಟ್ಕೊಂಡು ಬನ್ನಿ" ಅಂತ ಅಂದರು.

ಸರಿ, ಹದಿನೈದು ದಿವಸಗಳು ಕಳೀತು. ನನ್ನ ಪ್ರಾಬ್ಲಂ ಹಾಗೇ ಉಳ್ಕೊಂಡಿತ್ತು! ಈ ಸಲ ಅವರ ಹತ್ತಿರ ಹೋದಾಗ ಯಾಕೋ ಸ್ವಲ್ಪ ಕೋಪಿಸ್ಕೊಂಡ ಹಾಗೆ ಇತ್ತು.

"ಏನ್ರೀ?"

"ಅದೇ, ನಿದ್ರೆ ವಿಷಯ ಡಾಕ್ಟ್ರೆ, ಪ್ರಾಬ್ಲಮ್ಮು ಹಾಗೇ ಉಳ್ಕೊಂಡಿದೆ"

"Oh! I see. ನಿಮಗೆ ಎಷ್ಟೊತ್ತಿಗೆ ದಿನಾ ಎಚ್ಚರ ಆಗುತ್ತೀ?"

"ಹತ್ತು ಘಂಟೆ ಇಂದ ಹನ್ನೆರಡರವರೆಗೆ. ಮತ್ತೆ ಎರಡು ಘಂಟೆಯಿಂದ ನಾಲ್ಕು ಘಂಟೆಯವರೆಗೆ"

ಒಟ್ಟಿನಲ್ಲಿ ನಾಲ್ಕು ಘಂಟೆಗಳ ಕಾಲ ಅನ್ನಿ. ಆವಾಗ - ಅದೂ ರಾತ್ರಿ ಟೈಮ್‌ನಲ್ಲಿ - ಏನು ಮಾಡ್ತೀರಿ? ಅಡಿಗೆ ಮನೆಗೆ ಹೋಗಿ ಏನೂ ಲಗಾಯ್ಸಲ್ಲಾ ತಾನೇ?"

"ಅಯ್ಯೋ, ರಾತ್ರಿ ವಿಷಯ ಈಗ ಯಾರು ಮಾತಾಡಿದ್ದು ಡಾಕ್ಟ್ರೆ? ನಾನು ಇದುವರೆವಿಗೂ ನಿಮಗೆ ಕಂಪ್ಲೇಂಟ್ಸ್ ಕೊಟ್ಟಿದ್ದು ಹಗಲು ಹೊತ್ತಿನ ಬಗ್ಗೆ! ರಾತ್ರಿ ನಾನು ಮಾಮೂಲು ನಿದ್ರೆ ಅಚ್ಚುಕಟ್ಟಾಗೇ ಮಾಡ್ತೀನಿ. ಬೇಕಾದ್ರೆ ನನ್ನ ಹೆಂಡ್ತೀನೂ ಕೇಳಿ"

ಇದನ್ನ ಕೇಳಿ ಡಾಕ್ಟ್ರಗೆ ಕೋಪ ನೆತ್ತಿಗೇ ಏರಿತು. ಅವರೂ ಕೋಪಿಸ್ಕೊತಾರೇ ಅಂತ ನನಗೆ ಐಡಿಯಾನೇ ಇರಲಿಲ್ಲ. ಡಾಕ್ಟರುಗಳೂ ಲಾಯರ್‌ಗಳೂ ಅವರ ಗಿರಾಕಿಗಳ ಮೇಲೆ ಕೋಪ ಮಾಡ್ಕೊಳ್ಳೋಕೆ ಸಾಧ್ಯವೆ ಅಂತ ಅಂದುಕೊಂಡೆ. ಅಷ್ಟರಲ್ಲಿ ಅವರು "ಆ ಪುಣ್ಯಾತ್ಗಿತ್ತೀನ ಇಲ್ಲಿಗೇ ಕರ್ಕೊಂಡು ಬನ್ನಿ" ಅಂತ ಅಂದರು. ನಾನು "ಯಾವ ಪುಣ್ಯಾತ್ಗಿತ್ತೀ ಡಾಕ್ಟ್ರೆ?" ಅಂತ ಕೇಳ್ದೆ. "ಇನ್ಯಾರೂ, ನಿಮ್ಮ ಹೆಂಡ್ತೀನಾ" ಅಂತ ಗುಡುಗಿದರು. ಅವರ ವಾಯಿಸ್ ಕೇಳೇ ವೈಟಿಂಗ್ ರೂಮಿನಲ್ಲಿದ್ದ ಪೇಷಂಟ್ಸ್ ಎಲ್ಲಾ ಬೆಚ್ಚಿಬಿದ್ರು ಅಂಥ ಕಾಣುತ್ತೆ. "ಅಗ್ಲಿ ಡಾಕ್ಟ್ರೇ" ಅಂತ ಅಂದೆ ವೀಕಾಗಿ.

ಸರಿ ಮಾರನೇ ದಿನ ನನ್ನ ಹೆಂಡ್ತಿ ಜೊತೆಗೆ ಮತ್ತೆ ಹೋದೆ. ದೇವರ ದಯ, ಡಾಕ್ಟ್ರು ಫ್ರೀ ಆಗೇ ಇದ್ರು. ನನ್ನ ಕಡೇನೂ ನೋಡದೆ ನೇರವಾಗಿ ನನ್ನ ಹೆಂಡ್ತೀಗೇ ಇನ್‌ಸ್ಟ್ರಕ್ಷನ್ಸ್ ಕೊಟ್ಟರು. As usual, ಅದನ್ನ ಓದುಗರಿಗೂ ಒಪ್ಪಿಸ್ತೀನಿ:

''ನೋಡೀಮ್ಮಾ ನಿಮ್ಮೆಜಮಾನ್ರಿಗೆ ಸೀರಿಯಸ್ ಏನೂ ಇಲ್ಲ. ಆದರೆ ಈಗಿರೋ ಸ್ಥಿತೀನಾ ನಾನು ರಿಪೇರಿ ಮಾಡ್ಲಿಲ್ಲಾ ಅಂದರೆ ನಿಮ್ಮನ್ನ ಗೋಳು ಹೊಯ್ಕೊಂಡು ಸಾಯಿಸ್ತಾರೆ. ಅದಕ್ಕೇ ನಿಮಗೆ ಹೇಳ್ತಿರೋದು. ನಿಮ್ಮ ಯೆಜಮಾನ್ರಿಗೆ "Post retirement syndrome" ಅಂತ್ನೋದು ತಗಲಿದೆ. ಅಚ್ಚುಕಟ್ಟಾಗಿ ಬೆಳಿಗ್ಗೆ ತಿಂಡಿ ಹೊಡೆದು ನೀವು ಕೊಡೋ ಊಟದ ಟಿಫಿನ್ ಕ್ಯಾರಿಯರ್‌ನ ಆಫೀಸಿಗೆ ತೊಗೊಂಡು ಹೋಗಿ, ಅಲ್ಲಿ ಬೇರೇನೂ ಕೆಲಸ ಸಾಧಿಸದೇ - ಊಟಕ್ಕೆ ಮುಂಚೆ ಎರಡು ಘಂಟೆ ಕಾಲ, ಮಧ್ಯಾನ್ಹ ಎರಡು ಘಂಟೆ ಕಾಲ ಪ್ರತಿ ನಿತ್ಯಾ ಮೂವತ್ತು ವರ್ಷಗಳ ಕಾಲ ಜೀವನ ಸಾಗಿಸಿದ್ದಾರೆ. ಅದು ಯಾವ ಸರ್ಕಾರದ ಆಫೀಸೋ ಏನು ಕತೆಯೋ-''

''ಅದಕ್ಕೆ ಅವರಿಗೆ ಸರ್ವಿಸ್‌ನಲ್ಲಿ ಒಂದು ಪ್ರಮೋಶನ್ನೂ ಸಿಕ್ಕಲಿಲ್ಲ ಡಾಕ್ಟ್ರೇ-''

''ಹೋಗ್ಲಿ ಬಿಡಿ. ಈಗ it is too late. ನಾನು ಹೇಳ್ತಿದ್ದ ಹಾಗೆ ಅಂತಹ ಸ್ವರ್ಗ ಸುಖವಾಗಿದ್ದ ದಿನಚರಿ ಈಗ ರಿಟೈರ್ಡ್ ಆದಮೇಲೆ ಇವರಿಗೆ ನಿಂತ್ಹೋಗಿದೆ. ಈಗ ಅವರಿಗೆ ಹಗಲು ಹೊತ್ತು ನಿದ್ರೆ ಬರೆಸಬೇಕಾದರೆ ಒಂದೇ ದಾರಿ''

''ಏನಾದ್ರೂ ಸ್ಟ್ರಾಂಗ್ ಟ್ಯಾಬ್ಲೆಟ್ಸ್ ಇದ್ಯೆ ಡಾಕ್ಟ್ರೆ?''

''ಇಲ್ಲಮ್ಮ. ಇನ್ನೂ ಯಾರೂ ಕಂಡುಹಿಡಿದಿಲ್ಲ. ಹೀಗೆ ಮಾಡಿ, ನಿಮ್ಮ ಮನೆ ವರಾಂಡಾದಲ್ಲಿ ಅವರಿಗೆ ಅವರು ಆಫೀಸಿನಲ್ಲಿ ಕೂತ್ಕೊತಿದ್ರಲ್ಲಾ ಅದೇ ತರಹ ಒಂದು ಖುರ್ಚಿ ಹಾಕಿ. ಅದರ ಮೇಲೆ ಒಂದೆರಡು ದಿಂಬುಗಳನ್ನು ಇಡಿ. ಈಗಲೂನೂ ಅವರು ಮಾಮೂಲಾಗಿ ಆಫೀಸ್‌ಗೇ ಹೋಗ್ತಾರೆ ಅಂತ ಭಾವಿಸಿಕೊಂಡು ಬೆಳಿಗ್ಗೆ ಚೆನ್ನಾಗಿ ತಿಂಡಿ ಕೊಟ್ಟು ಊಟದ ಟಿಫಿನ್ ಕ್ಯಾರಿಯರ್‌ನೂ ಕೈಗೆ ಕೊಡಿ. ವರಾಂಡಾದಲ್ಲಿ ಹೋಗಿ - ಇಲ್ಲಾ ನಿಮ್ಮ ಗ್ಯಾರೇಜ್‌ನಲ್ಲಾದ್ರೂ, ಆಗುತ್ತೆ - ಆ ಖುರ್ಚೀಲಿ ಕೂತ್ಕೊಂಡು ಅವರ ಪಾಡಿಗೆ ಅವರು ದಿನಚರಿ ಕಳೀಲಿ. ಪಕ್ಕದಲ್ಲಿ ಒಂದು ಟೇಬಲ್ ಮೇಲೆ ಒಂದೋ ಎರಡೋ ನ್ಯೂಸ್ ಪೇಪರ್ರುಗಳು - 'ಹಿಂದೂ' ಇದ್ರೆ ಉತ್ತಮ ಒಂದು ಲೋಟಾ ನೀರೂ, ಒಂದು ಪೆನ್ನೂ ಇಷ್ಟು ಇಡಿ. ನಿಮ್ಮ ಪಾಡಿಗೆ ನೀವು ಅಡಿಗೇ ಮನೇಲೋ

ಮನೆ ಹೊರಗೋ ಇರಿ. ಅಲ್ಲೇ ನಿದ್ರೆ ಮಾಡ್ಕೊಂಡು ಮುಂಚಿನ ತರಹಾನೇ ಆಗ್ತಾರೆ!''

ನನ್ನ ಹೆಂಡ್ತೀಗೆ, ಪಾಪ, ಒಂದೇ ಯೋಚನೆ ಬಂತು ''ಅಲ್ಲಾ ಡಾಕ್ಟ್ರೇ, ಅವರು ರಿಟೈರ್ಡ್ ಆದರು ಅಂತ ಅವರನ್ನ ಸ್ವಲ್ಪ ಅಡಿಗೆ ಮನೆ ಕೆಲಸಕ್ಕೆ ಬಿಟ್ಟು ನಾನು ಇನ್ನು ಮೇಲಿಂದ ವೀಣೆ ಪ್ರಾಕ್ಟೀಸ್ ಮಡೋಣ ಅಂತ ಇದ್ದೆ'' ಅಂತ ಹಂಬಲಿಸಿದಳು. ಡಾಕ್ಟ್ರು ''ಏನು ಮಾಡೋದಮ್ಮ. ಸಂಸಾರದಲ್ಲಿ ಈ ಥರದ್ದೆಲ್ಲಾ ಹೇಗೋ ನಿಭಾಯಿಸ್ಕೊಬೇಕು. ನೀವು ಹೊರಡಿ. ತಡಮಾಡಬೇಡಿ'' ಅಂತ ಕಳಿಸಿಬಿಟ್ರು.

ಏನಾಶ್ಚರ್ಯ ಅಂತೀರಿ! ಅವತಿನಿಂದ ವರಾಂಡದಲ್ಲೇ ಕೂತ್ಕೊಂಡು - ನಮ್ಮ ಆಫೀಸಿನಲ್ಲಿ ಮೂವತ್ತು ವರ್ಷಗಳಿಂದ ಮಾಡ್ತಿದ್ದ ತರಹಾನೇ - ಎಷ್ಟು ಚೆನ್ನಾಗಿ ನಿದ್ರೆ ಮಾಡ್ತೀನಿ ಗೊತ್ತೆ? ಆ ನಾಲ್ಕು ಘಂಟೆಗಳ ಕಾಲ, ಪ್ರಪಂಚದಲ್ಲಿ ಏನು ಆಗ್ತಿದೆ ಅಂತಾನೇ ತಿಳಿಯೋಲ್ಲ. ನನ್ನ ಹೆಂಡ್ತಿ ವೀಣೆ ಪ್ರಾಕ್ಟೀಸ್ ಮಾಡ್ತಿದ್ರೂ ನನಗೆ ಸುತಾರಾಂ ಎಚ್ಚರ ಆಗೋಲ್ಲ ಅಂತ ಅಂದರೆ ನೀವೇ ಊಹಿಸ್ಕೊಳ್ಳಿ ಎಂತಹಾ ಒಳ್ಳೇ ನಿದ್ದೆ ಅಂತ. ತಿಂಡಿ, ಕಾಫಿ, ಊಟ, ಟೆಲಿಫೋನ್, ಹಿಂದೂ ಪೇಪರ್ ಎಡಿಟೋರಿಯಲ್ಲು - ಈ ತರಹಕ್ಕೆ ಆಗಾಗ ಸ್ವಲ್ಪ ಏಳ್ತೀನಿ ಅಷ್ಟೆ. ಅದೇ, ಆಫೀಸ್ ತರಹಾನೇ!

ಅಯ್ಯೋ, ನಾನು ಇಷ್ಟೆಲ್ಲಾ ಹೇಳ್ತಿರೋದು ನನ್ನ ಹಗಲು ನಿದ್ರೆಯ ಬಗ್ಗೆ. ಸದ್ಯ ನೀವ್ಯಾರೂ ನನ್ನ ರಾತ್ರಿಯ ನಿದ್ರೆಯ ಬಗ್ಗೆ ಯೋಚಿಸ್ಬೇಡಿ. ಅದು ಮಾಮೂಲಾಗಿ ಯಾವ ತೊಂದರೆಯೂ ಇಲ್ಲದೆ ಚೆನ್ನಾಗಿ ನಡೀತಿದೆ. ಸದ್ಯ ರಾತ್ರಿ ನಿದ್ರೆಗೂ ರಿಟೈರ್‌ಗೂ ದೇವರು ಯಾವ ಸಂಬಂಧವನ್ನೂ ಕಲ್ಪಿಸಿಲ್ಲವಲ್ಲ!

ಯಾಕೋ ಏನೋ ತುಂಬಾ ಆಕಳಿಕೆ ಬರ್ತಾ ಇದೆ. ನಾನು ಇಲ್ಲಿಗೆ ಮುಗಿಸ್ತೀನಿ. ಗುಡ್‌ಡೇ! ಸ್ವೀಟ್ ಡ್ರೀಮ್ಸ್!!

| |
|---|
| ಸತ್ಯ<br>ಸುಳ್ಳಿಗೆ ಸುಳ್ಳು<br>ಸೇರಿದರೆ ಸತ್ಯ<br>ಉದಾಹರಣೆಗೆ<br>ನಮ್ಮ ದಾಂಪತ್ಯ!<br>- ಹೆಚ್. ಡುಂಡಿರಾಜ್ |

# ಆಚಾರಿ ಬಿಕ್ಕಳಿಸಿ ಅತ್ತ

– ಹೆಚ್.ಕೆ. ರಾಮಚಂದ್ರಮೂರ್ತಿ

ಆಚಾರಿಯ 'ಹ್ಯಾಪ್‌ಮೋರೆ' ನೋಡಿ ವಾಯು ದೇವರಿಗೆ ಅಸಾಧ್ಯ ನಗು ಬಂತು, ಅರೆ ಮುಚ್ಚಿದ ಕಣ್ಣುಗಳ ಕೆಳಗೆ ಆಂಜನೇಯ ಸ್ವಾಮಿಯ ಉಬ್ಬಿದ ಕಪೋಲಗಳ ಸ್ಪಂದನವನ್ನು ಆಚಾರಿ, ನೋಡಿರೂ ನೋಡದವನಂತೆ ಸುಮ್ಮನಿದ್ದ.

ದೇವರಾದರೇನಂತೆ? ಉಕ್ಕಿ ಬರುವ ನಗುವನ್ನು ದೇವಾದಿದೇವತೆಗಳು ತಾನೆ ಎಷ್ಟು ಹೊತ್ತು ತಡದಾರು?

'ಖ್ಹಿ, ಖ್ಹಿ, ಖ್ಹಿ' ಸ್ವಾಮಿಯ ವಿಗ್ರಹದ ಹಿಂದಿನಿಂದ ಮೇಲೇರಿ ಬಂದ ನಗೆಯಲೆಗಳು ಆಚಾರಿಯನ್ನು ಕಿಚಾಯಿಸಿದವು, ಧೃತಿಗೆಡಿಸಿದವು, ಗೊಂದಲವೆಬ್ಬಿಸಿದವು.

ಆಚಾರಿ ಕತ್ತೆತ್ತಿ ನೋಡಿದ. ಗುಡಿಯಲ್ಲಿ ಆವರಿಸಿತ್ತು ಮೌನ. ಕುಂಟ ಗುಂಡಾಚಾರಿಗೆ 'ಟೆಂಪರರಿ'ಯಾಗಿ ಮೂರು ದಿನದ ಗುಡಿಯ ಕೆಲಸ ಒಪ್ಪಿಸಿ ಆಚಾರಿ, ನಾದ್ನಿ ಮಗಳ ಮದುವೆಗೆ, ವೆಂಕು ಸಮೇತನಾಗಿ ಬೆಂಗ್ಳೂರಿಗೆ ಖುಷಿಯಾಗಿ ಒಬ್ಬನೇ ಹೋಗಿ ವಾಪಸಾಗಿದ್ದ. ಇವತ್ತು ಯಾಕೋ ಗಲಿಬಿಲಿಯಲ್ಲಿದ್ದ.

ಗುಡಿ ತುಂಬಾ ಕಸದ ರಂಪ, ಅವನೇ ಕಸ ಗುಡಿಸಿದ ಕೆಟ್ಟ ಧೂಳು. ನಿರ್ಮಾಲ್ಯದ ಹೂವುಗಳನ್ನು ತೆಗೆದು ಮೈಯಲ್ಲಾ ಘೋರವಾಗಿ ನೆಗ್ಗಿಹೋದ ತಾಮ್ರದ ಚೊಂಬಿನಿಂದ ಸ್ವಾಮಿಗೆ 'ಝಳಕ' ಮಾಡಿಸಿದ. ಯಾಕೋ ಆಚಾರಿ ತುಂಬಾ ಮಂಕಾಗಿದ್ದ. ಗುಡಿ ಕೆಲಸದಲ್ಲಿ ಅವನಿಗೆ ಮನಸ್ಸೇ ಇಲ್ಲ, ಇವತ್ತು ಇಷ್ಟು ಸಾಲದು ಅಂತ ಸ್ವಾಮಿ ಗಹಗಹಿಸಿ ನಕ್ಕಾಗ ಆಚಾರಿ ತಬ್ಬಲಿಯಂತಾಗಿ ಅವನಿಗೆ ಅಳುವೇ ಬಂದಿತ್ತು.

''ಪ್ರಭೂ, ಯಾಕೆ ನನ್ನ ಅವಸ್ಥೆ ನೋಡಿ ನಿಮಗೂ ನಗು ಬಂತೇ? ಕೆಮ್ಮುತ್ತಲೇ ಕೇಳಿದ, ಆಚಾರಿ. ಆಂಜನೇಯ ಸ್ವಾಮಿಗೆ 'ಅಯ್ಯೋ' ಅನಿಸಿತು. ಆದರೆ ಆಚಾರಿಯನ್ನು ಹತ್ತಿರ ಕರೆದು ವಾತ್ಸಾಲ್ಯದಿಂದ ಅಪ್ಪಿಕೊಂಡು ಅವನ ಬೋಳುತಲೆಯನ್ನು ಆಘ್ರಾಣಿಸಲಿಲ್ಲ.

'ಅಲೆ, ಇಷ್ನ'! ನಿನ್ನ ನೋಡಿ ನಗಲಿಲ್ಲ ಕಣೋ... ಬೆಳಗಿನಿಂದ ಯಾಕೋ ಪೆಚ್ಚು ಮುಖ ಹಾಕ್ಕೊಂಡಿದೀಯಲ್ಲಾ ಏನು ಎತ್ತ? ಏನಾಯ್ತಲೆ, ನಿನಗೆ ಇವತ್ತು?

ಇನ್ನೂ ಗುಡಿಗೆ ಭಕ್ತಾದಿಗಳು ಯಾರೂ ಬಂದಿರಲಿಲ್ಲ. ಹನುಮಂತ ಸ್ವಾಮಿ ಮುಂದೆ ಆಚಾರಿಯ ಏಕಾಂತಕ್ಕೆ ದಿವಿನಾದ ಅವಕಾಶ. ಹಿಂದಿನ ಕೆಲವು ವಾರಗಳ ಖಾಸಗಿ ಘಟನೆ ಗಳನ್ನು 'ಮಗುಂ' ಆಗಿ ವರದಿ ಮಾಡಲು ನಿರ್ಧರಿಸಿದ.

'ನಿಮ್ ಮುಂದೆ ಏನು ಮುಚ್ಚಾಮರೆ? ಕೇಳಿ ಸ್ವಾಮಿ, ಎಲ್ಲಕ್ಕೂ ಕಾರಣವಾದದ್ದು ಅರ್ಧ ಕೆ.ಜಿ. ಬೆಣ್ಣೆ.

ಆಚಾರಿ ಮಾತು ಮುಗಿಸುವಷ್ಟರಲ್ಲಿ ಸ್ವಾಮಿಯ ರಸ ಪ್ರಶ್ನೆಗಳು: 'ಏನೋ ನೀನ್ ಹೇಳೋದು? ಒಳ್ಳೆ ಒಗಟಿದ್ದ ಹಾಗಿದೆಯಲ್ಲೋ?... ಬೆಣ್ಣೆಗೂ (ಕಾಡುಗಲ್ಲಿನಂಥ, ಅಂತ ಸ್ವಾಮಿ ಬಾಯಿಬಿಟ್ಟು ಹೇಳಿಲ್ಲ) ನಿನ್ನ ಧರ್ಮಪತ್ನಿ ವೆಂಕೂಗೂ ಏನು ಸಂಬಂಧವೋ?

ಪೂರ್ವೋಕ್ತವೆಂಕು ಉರುಫ್ ವೆಂಕೂಬಾಯಿ ಮಹಾ ಘಟವಾಣಿ, ಅವಳು ಆಚಾರಿಯನ್ನು ಕಿಳ್ಳೇ ಕ್ಯಾತನ ಗೊಂಬೆ ಹಾಗೆ ಕುಣಿಸ್ತಾಳೆ ಎಂಬುದು ಊರಿಗೆಲ್ಲಾ ತಿಳಿದಿರುವಾಗ ಲಂಕೆಯನ್ನು ಎಕ್ಕಾ ಹುಟ್ಟಿಸಿದ್ದ ರಾಮ ಭಂಟನಿಗೆ ಅಷ್ಟೂ ತಿಳಿವಲ್ದೆ?

ಆಚಾರಿಯನ್ನು ಚುಡಾಯಿಸಲೆಂದೇ ಪ್ರಾಣದೇವರು ಪ್ರಶ್ನೆ ಕೇಳಿದ್ದರು. ಬೆಂಗಳೂರಿನ ಘಟನೆಗಳನ್ನು ಆಚಾರಿ ಬಾಯಿನಿಂದಲೇ 'ಒನ್ಸ್‌ಮೋರ್' ಕಿರಲಿಸುವುದು ಸ್ವಾಮಿಯ ಉದ್ದೇಶ.

ಏನು ಸಂಬಂಧ ಅಂತಿಯಾ? ಹೇಳ್ತಿನಿ ಕೇಳು, ಪ್ರಭು (ಕೆಲವೊಮ್ಮೆ ಬ್ಹಾಳ ಎಕ್ಸೈಟ್ ಆದಾಗ ಆಚಾರಿ ದೇವರನ್ನು ಏಕವಚನದಲ್ಲೂ ಮಾತನಾಡಿ ಸುತ್ತಿದ್ದುದುಂಟು)

ಅದೇ ನಮ್ಮ ಶೀನಪ್ಪ ವಾರವಾರವೂ ಬೆಣ್ಣೆ ತಂದು ಕೊಡ್ತಾನಲ್ಲಾ...

ಗೊತ್ತು ಕಣ್ ಆಚಾರಿ, ಹೇಳೋ...

ಬೆಳಗುಂಬದ, ಹುಳುಕು ಮುಖದ ಕುಳ್ ಶೀನಪ್ಪ ತಂದ್ಕೊಟ್ಟ ಬೆಣ್ಣೆಯನ್ನು ಘಮ್ಮಗೆ ಕಾಯ್ಸಿ ಯಾರಿಗೂ ಕಾಣದ ಹಾಗೆ ತೆಗೆದಿಡು... ಹಬ್ಬ ಹರಿದಿನಗಳಲ್ಲಿ, ದ್ವಾದಶಿ ದಿನ, ರಾಯ್ರ ಆರಾಧನೆ ದಿನ ಕಡಬು, ಹ್ವಾಳ್ಗೆ, ಹಯಗ್ರೀವ ಇವಕ್ಕೆ ಆ ಹಾಳು ಕಿಣಿ ಅಂಗ್ಡಿ ತುಪ್ಪ ಬ್ಯಾಡಾ ಅಂತ ವೆಂಕೂಗೆ ಹೇಳ್ತಾನೆ ಇದ್ದೆ...''

'ಸರಿ... ಆಮೇಲೆ?' ಕುತೂಹಲ 'ಕೊತಕೊತ' ಅಂತ ಕುದಿಯುತ್ತಿದೆಯೋ ಎಂಬ ಧ್ವನಿಯಿತ್ತು ಜೈಮಾರುತಿಯ ಪ್ರಶ್ನೆಯಲ್ಲಿ.

''ಹಾಂ... ಅವತ್ತು ದ್ವಾದಶಿ. ಪಾರ್ಣೆಗೆ ಅಂತ ಕೂತಾಗ ಇಕಿ 'ತುಪ್ಪಾಂತ' ಹಾಕ್ತಾಳೆ - 'ಗಬೊ' ಅಂತ ನಾತ, ದುರ್‌ವಾಸನಿ... ವಾಂತಿ ಬಂದ್ಹಾಂಗಾಯ್ತು ನಂಗೆ ರೇಗ್ತು, ''ಬೆಣ್ಣೆ ಕಾಯಿಸಿದ ತುಪ್ಪ ಎಲ್ಲಿ ಹೋಯ್ತು, ವೆಂಕೂ, ಅಂದೆ. ಅಯ್ಯೋ, ತಿನ್ರಿ ಸಾಕು, ಆ ತುಪ್ಪ ಖರ್ಚಾಯ್ತು. ಅಂದ್ಲು ಸಿಟ್ಟು ನೆತ್ತಿಗೇರಿತ್ತು. ಉತ್ತರಾಪೋಷ್ನ ತಗಂಡು ಎದ್ದು ಹೋದೆ. ಆದರೆ ಆಕಿ ಚಕ್ಕಳ ಮಕ್ಕಳ ಹಾಕ್ಕಂಡು ಕೂತು ಒಂದು ತೊಪ್ಪಲಿ ಪಾಯಸಾನೂ, ಸುರೊಂಡು ನೆಕ್ಕಿ ಬಿಟ್ಳು ಪ್ರಭು.... ನೆಕ್ಕಿಬಿಟ್ಳು, ದ್ವಾದಶಿ ದಿನವೂ ಏಕಾದಶಿ ಮಾಡಬೇಕಾಗಿ ಬಂದ ಆ ದುರ್‌ದಿನದ ನೆನಪು ಆಚಾರಿಯನ್ನು ರೊಚ್ಚಿಗೇಳಿಸಿತ್ತು. ಅವನ ದುಃಖಕ್ಕೆ ಅರ್ಥವಿತ್ತು.

'ಸರಿ ಕಣಲೇ... ಅದೆಲ್ಲಾ ಕಳೆದುಹೋದ ಕಥಿ. ಬೆಂಗಳೂರಿನ ತಾಜಾ ಸುದ್ದಿ ಹೇಳೋ ಅಂದ್ರೆ....'

''ಇರಿ, ಪ್ರಭು, ಆ ಬೆಣ್ಣೆ ಕಥೆ ಮುಗಿದಿಲ್ಲ, ಇನ್ನೂ ಇದೆ. ವಾರವಾರವೂ ಬಂದ ಬೆಣ್ಣೇನ ತಗ್ದು ಏನು ಮಾಡ್ತಿದಾಳೆ ಇವ್ಳು ಅಂತ ಅನುಮಾನ ಬಂತು ನನಗೆ. ಸುಮಾರು ಹೊತ್ತು ಆಕಿ ರೇಗ್ತಾಳೆ - ರಡ್ವಾದ ಮಾಡ್ತಾಳೆ ನಾನು ಪಾಟಿ ಸವಾಲು ಮಾಡೇ ಮಾಡ್ತಿನಿ... ಕಡೀಗೆ ನಂಗೆ ತಿಳೀತು - ಬೆಣ್ಣೀಯೆಲ್ಲಾ ಈಕಿ ಇವಳ ತಮ್ಮ ಮಗಳ ಮನಿಗೆ, ಸೋದರತ್ತೆ ಸೊಸಿ ಮನೆಗೆ ಕಳ್ಳಸಾಗಣೆಯಾಗುತ್ತಿದೆ ಅಂತ.'

ಮಾರುತಿಯ ತಾಳ್ಮೆ ಹಳಿ ತಪ್ಪಿತ್ತು

'ತಥ್ ಇವ್ನ! ಮುಂದಕ್ಕೆ ಹೋಳೋ!'

'ಅದಕ್ಕೆ ನಾನೊಂದು ಪ್ಲಾನ್ ಮಾಡ್ದೆ ಅವತ್ತೊಂದು ದಿನ ಇವಳು ಮನೇಲಿ ಇಲ್ಲದಾಗ ನಾನು ಅವಳಿಗೆ ಕಾಣದ ಹಾಗೆ ಬೆಣ್ಣೆ ತೆಗೆದು ಮುಚ್ಚಿಟ್ಟೆ - ಬ್ರೆಡ್ ಅಂಗಡಿ ಅಯ್ಯಂಗಾರಿಗೆ ಕೊಟ್ಟು ಕಾಯಿಸಿಟ್ಟಿರು ಅಂತ ಹೇಳಿದೆ - ಇವಳು ಸಂಜಿ ಮುಂದೆ ಬಂದ್ಲು, ಬೆಕ್ಕಿನ ಹಾಗೆ ಹೊಂಚು ಹಾಕ್ತಾ ಹುಡುಕೇ ಹುಡುಕ್ತಾಳೆ. ತಡಿಲಾರದೆ ಕೇಳ್ತಾಳೆ; 'ರ್ರೀ, ಬೆಣ್ಣೆ ಎಲ್ರೀ (ಅಪರೂಪಕ್ಕೆ ವೆಂಕೂ ಬಾಯಿ ತನ್ನ ಪತಿ ದೇವರನ್ನು ಬಹುವಚನದಲ್ಲೂ ಮಾತನಾಡಿಸಿದ್ದುಂಟು)

ಅವಳ ಪ್ರಶ್ನೆಗೆ ಮೊದಲೇ ನನ್ನಲ್ಲಿ ಉತ್ತರ ಸಿದ್ಧವಿತ್ತು. ''ಅಯ್ಯೋ... ವೆಂಕೂ... ನಾನು ಏನು ಹೇಳಲಿ? ಚಳಿಗಾಲದಲ್ಲಿ ಎಂಥ ಪವಾಡ, ಎಂಥ ಸೋಜಿಗ ನಡೆದುಹೋಯ್ತು ಇವತ್ತು! ಶೀನಪ್ಪನ ಬೆಣ್ಣೇನ ಮುಂದಿನ ಕೋಣೆಯಲ್ಲೇ ಇಟ್ಟಿದ್ದೆ. ಅರ್ಧಗಂಟೆ ಆದಮೇಲೆ ಹೋಗಿ ನೋಡ್ತೇನಿ... ಹೀಗೂ ಉಂಟೇ... ಆ ಹಳೆ ಕ್ಯಾಲಂಡರಿನಲ್ಲಿರೊ ಮೊದ್ದು ಕೃಷ್ಣ 'ಠಮಕ್

ಠಮಕ್' ಅಂತ ಕೆಳಗಿಳಿದು ಬಂದು ಆ ಗೆಜ್ಜೆಕಾಲ್ ಕ್ರಿಷ್ಣ್ಯಾ, ಬೆಣ್ಣೆ ಅಷ್ಟನ್ನೂ ತಿಂದುಬಿಟ್ಟ ಕಣೇ... ಖಾಲಿ ಪಾತ್ರೆ ಅಲ್ಲೇ ಅದೆ ನೋಡು ಬೇಕಾದ್ರೆ ಆಮೇಲೆ ಕಣ್ಣು ಮುಚ್ಚಿ ತೆಗೆಯೋದ್ರಲ್ಲಿ ಆ ಪೋಲಿ ಕೃಷ್ಣ ಮತ್ತೆ ಓಡಿ ಹೋಗಿ ಹಳೇ ಕ್ಯಾಲಂಡರಿನಲ್ಲಿ ಕೂತಿದ್ದಾನೆ. ಅದ್ನಾ ಏನ್ ಹೇಳ್ಲಿ ವೆಂಕೂ.

'ವೆಂಕು ಬಹಳ ಹೊತ್ತು ಗರಬಡಿದವಳಂತೆ ನಿಂತಿದ್ಲು. ಆಮೇಲೆ ತಲೆಮೇಲೆ ಕೈ ಹೊತ್ತು ಕೂತಿದ್ಲು. ಸಿರ್‍ರಂತ ಒಮ್ಮೆಲೆ ರೇಗಿ 'ಏನ್ರಿ... ನಿಮಗೇನು ತಲೆಗಿಲೆ ಕೆಟ್ಟದೆಯೋ, ಹ್ಯಾಗೆ? ಕ್ಯಾಲಂಡರ್ ಕೃಷ್ಣ ಇಳಿದು ಬಂದು ಬೆಣ್ಣೆ ತಿಂದನಂತೆ!! ಬೆಣ್ಣೆನಾ! ನಿಮಗೆಲ್ಲೋ ಪಿತ್ತ ಕೆರಳಿದೆ... ಅಯ್ಯೋ ನನ್ನ ಹಣೆಬರಹವೇ ತಲೆ ತಲೆ ಚಚ್ಚಿಕೊಂಡ್ಳು. 'ಅರೆ, ಅದ್ಯಾಕೆ ಹಾಗೆ ವದ್ರ್ಯಾಡ್ತಿಯೇ? ದಾಸರ ಪದದಲ್ಲಿ ಹೇಳೂದಿಲ್ಲೇನು, ಹಾಗಂತ ಆಚಾರ್‍ರು ಪುರಾಣದಲ್ಲಿ ಹೇಳ್ತಾರೆ ... ''ನಮ್ಮ ಕೃಷ್ಣ ಬೆಣ್ಣೆ ಕದ್ದ ನಮ್ಮಾ'' ಅಂತ?

'ಬಾಯಿ ಮುಚ್ರಿ ಸಾಕು... ಆಚಾರ್‍ರು ಇರೋದು ಗುಡಿಲಿ ಪುರಾಣ ಹೇಳೋಕೆ ಆದ್ರೆ ಬೆಣ್ಣೆ ಇರೋದು ನಾವು ತಿನ್ನೋಕೆ, ತಿಳೀತಾ? ಇಲ್ಲಾರಿ ನಿಮ್ಗೆ ಪೂರಾ ತಲೆ ಕೆಟ್ಟಿದೆ...?

'ಇಲ್ಲಿ ಕೇಳು ವೆಂಕೂ...'

'ನಿಂಬೆ ಹಣ್ಣು ತರಿಸಿ ತಲೆಗೆ ತಿಕ್ತೇನೆ, ಬನ್ರೀ ಅಲ್ಲಾ ಅಣ್ಣಯ್ಯಪ್ಪ, ಹೇಳ್ತಾ ಇದ್ದ. ಯಾವಾಗ್ಲೂ ಗುಡೀಲಿ ಜೋರಾಗಿ ಒಬ್ಬರೇ ಮಾತನಾಡಿಕೋತೀರಂತೆ ಊರಿಗೆ ಊರೇ ಹೇಳಿದೆ - ನಿಮಗೆ ಹುಚ್ಚು ಅಂತ ವೆಂಕೂ, ಸಿಟ್ಟು, ಕಣ್ಣೀರು, ಸಿಂಬಳಾ, ಮೂಗು ಒರೆಸುವ 'ಠುಯ್' ಶಬ್ದಗಳ ನಡುವೆ ದೊಡ್ಡದಾಗಿ ದನಿ ತೆಗೆದುಕೊಂಡು ಗೊಳೋ ಅಂತ ಅತ್ತಳು, ಪ್ರಭು!... ಆದ್ರೆ ನಾನು ಮಾತ್ರ ಹಿಡಿದ ಪಟ್ಟು ಬಿಡದೆ ಕೃಷ್ಣ ಬೆಣ್ಣೆ ತಿಂದದ್ದು ಹೌದು, ನಾನೇ ಕಣ್ಣಾರೆ ಕಂಡೆ' ಅಂತ ಸಾಧಿಸಿದೆ. ಅವಳು ಮತ್ತೆ ಮತ್ತೆ ಮೊದಲಿನಿಂದ ಶುರುಮಾಡಿ ತಲೆ ಚಚ್ಚಿಕೊಳ್ತಾ ರೂಮಿಗೆ ಹೋಗಿ ಬಾಗಿಲು ಹಾಕ್ಕೊಂಡ್ಳು. ಅವತ್ತಿಂದ ಮಾತಿಲ್ಲ ಕತೆಯಿಲ್ಲ ಮಂಕುಬಡಿದವಳ ಹಾಗಿದ್ಲು.'

ಮಾರುತಿಗೆ ಇನ್ನು ತಡೆಯಲಾಗಲಿಲ್ಲ

'ಲೇ, ಗೊಡ್ಡಾಚಾರಿ... ಮತ್ತೆ ತಗದೆಯಲ್ಲೋ ನಿನ್ನ ಅಡ್ಡಮಾತ್ನ? ನಿನ್ನ ನಾದನಿ ಮಗಳ ಮದುವೆಗೇಂತ ವೆಂಕೂಬಾಯಿ ಜತೆ ಬೆಂಗ್ಳೂರಿಗೆ ಹೋಗಿ ಬಂದ್ಯಲ್ಲೋ? ಆ ಕಥಿ ಹೇಳೋ ಅಂದ್ರೆ... ಮತ್ತೇನೋ ತೌಡು

ಕುಟ್ಟುತ್ತೀಯಲ್ಲೋ, ಮಗ್ನೆ? ಮಾರುತಿ ಬೈದಾಗ ಆಚಾರಿ ಗೆಲುವಾದ. 'ಹಾ... ಈಗ ಆ ವಿಷಯಕ್ಕೆ ಬರೋಣ. ಮದ್ವೀಗೇಂತ ಬೆಂಗಳೂರಿಗೆ ಹೊರಟ್ವಿ, ದಾರಿಲಿ, 5-6 ಗಂಟೆ, ಇಕಿ. ತಲೆ ಎತ್ತಲಿಲ್ಲ ಬಾಯಿ ಬಿಟ್ಟಿದ್ದರೆ ನನ್ನಾಣೆ! ಬಾಯಿಗೆ ಒಂದು ಉದ್ಧರಣೆ ನೀರು ಬಿಡಲಿಲ್ಲ ಅಂತೀನಿ. ಒಬ್ಬಳೇ ಬಸ್ಸಿನ ಕಿಟಕಿ ಆಚೆ ನೋಡ್ತಾ ಮುಸು ಮುಸು ಅಳ್ತಿದ್ಲು... ಬೆಂಗಳೂರಿಗೆ ಹೋದ್ವಿ, ಮದುವೆ ಕಳಿಯಿತು. ಮಾರನೆ ದಿನ ಇಕಿ ಒಬ್ ಅಣ್ಣ 'ನಿಮ್‌ಹಾನ್ಸ್'ನಲ್ಲಿ ತಲೆ ಪರೀಕ್ಷೆ ಡಾಕ್ಟರಂತೆ ಅವನ ಜತೆ ಇವಳೊಬ್ಬಳೆ ರೂಮಿನಲ್ಲಿ ಬಾಗಿಲು ಹಾಕ್ಕೊಂಡು ಕೂತು ಭ್ಹಾಳ ಹೊತ್ತು 'ಗುಸು ಗುಸು' ಮಾತನಾಡ್ತಿದ್ಲು. ಸಂಜೆ ಮುಂದೆ ಅವ್ನು ನನ್ನ ಭಾಮೈದ - ಅವ್ನ್ ಹೆಸ್ರು ನಾಗ್ರಾಜ. ಆ ನಾಗ್ರಾಜ, ನನ್ ಒಬ್ಬನ್ನೇ, ರೂಮಿನೊಳಕ್ಕೆ ಕರೆದು ಬಾಗಿಲು ಹಾಕಿದ ನನ್ನ ಪರೀಕ್ಷೆ ಶುರು ಮಾಡ್ದ ಅಂತೀನಿ! ನೋಡು, ಅನಂತು ಕ್ಯಾಲಂಡಿರಿನಲ್ಲಿದ್ದ ಕೃಷ್ಣ ಬಂದು ಬೆಣ್ಣೆ ತಿಂದ್ಹೋದ ಅಂದ್ಯಂತಲ್ಲೋ? ನಿಜವೇನೋ? ಹೇಳಪ್ಪ ಮನಸ್ಸು ಬಿಚ್ಚಿ ಫ್ರೀಯಾಗಿ ಮಾತನಾಡೋ' ಅಂದ.

ನಾನು ಗಟ್ಟಿಯಾಗಿ ನಕ್ಕೆ. ಬಿದ್ದು ಬಿದ್ದು ನಕ್ಕೆ. ಮತ್ತೆ ಎದ್ದು ನಿಂತು ನಕ್ಕೆ. ಏತನ್ಮಧ್ಯೆ ನಾಗ್ರಾಜ ನನ್ನನ್ನು ನೋಡುತ್ತಾ ನೋಟ್ ಬುಕ್‌ನಲ್ಲಿ ಎಂಥದೊ ಗುರ್ತು ಹಾಕ್ಕತಿದ್ದ - ಯಾವುದೋ ದೊಡ್ಡ ಮೆಡಿಕಲ್ ಬುಕ್ ತಗ್ದು ಅದರೊಳಗಿಂದ ಏನನ್ನೋ ನೋಡಿ ನೋಡಿ ಬರ್ಕತಿದ್ದ. ನಾನು 'ಥಿ ಥಿ.. ಇಂದೆಂಥ ಪ್ರಶ್ನೆಗಳೋ ನಾಗ್ರಾಜ? ದ್ವಾಪರ ಯುಗದ ಕೃಷ್ಣ - ಆ ಹಳೆ ಕ್ಯಾಲಂಡರ್‌ನಲ್ಲಿ ಧೂಳು ತಿನ್ನುತ್ತಾ ಇರೋ ಕೃಷ್ಣ, ಅದನ್ನು ಬಿಟ್ಟು ಬಂದು ಬೆಣ್ಣೆ ತಿಂತಾನೇನೋ?... ಆ ಕೆಟ್ಟ ಬಣ್ಣದ ಚಿತ್ರದಲ್ಲಿರೋ ಕೃಷ್ಣ? ನಿನಗೇನಾದರೂ ತಲೆಗಿಲೆ ಕೆಟ್ಟಿದೆಯಾ ನಾಗ್ರಾಜ? ಅಂದೆ, ಮತ್ತೆ ನಕ್ಕೆ. ಈ ಸಲ ಕಳಗೆ ಬಿದ್ದು ಬಿದ್ದು ನಗಲಿಲ್ಲ - ಕಾಲು ಉಳುಕಿತ್ತು. ನಾಗ್ರಾಜ ಬರ್ಕ್ಕೊಳೋದನ್ನು ನಿಲ್ಲಿಸಿದ್ದ. ಭ್ಹಾಳ ಹೊತ್ತು ಯೋಚಿಸಿ 'ಅಲ್ಪಪ್ಪಾ... ನೀನು ಹಾಗಂತ ವೆಂಕೂ ಹತ್ತಿರ ಬಡಬಡಿಸಿದಂತ್ಯಲ್ಲೋ? ಗುಡೀಲಿ ಒಬ್ಬನೇ ಸಿಕ್ಕಾಪಟ್ಟೆ ಒಬ್ನೇ ಮಾತನಾಡಿಕೋತಿರ್ತಿಯಂತೆ. ಯಾಕಪ್ಪಾ ಮನಸ್ಸಿಗೆ ಏನಾದರೂ ಶಾನೆ 'ವರಿ' ಆಗಿದೆಯೇನೋ? ಎಂದು ಹೇಳುತ್ತಾ ಶತಾಸ್ಕೋಪ್ ಕಿವಿಗೆ ಹಚ್ಕೊಂಡು ನನ್ನ ಎದೆ ಬೆನ್ನು ಎಲ್ಲಾ ಕಡೆ ಆಡಿಸಿದ. ಡಬಡಬ ಬಡಿದ ಎಲ್ಲಿ ನಾಲ್ಗೆ ತೋರ್‍ಸು... ನಿನ್ನ ಕೈ ಬೆರಳು ನೀಡು ಅಂತ ಏನೇನೋ ಪರೀಕ್ಷೆ ಮಾಡಿ ಸೋತ, ನನಗೆ ಅರ್ಥವಾಯಿತು. ನಾನು ಎಲ್ಲವನ್ನು ವಿವರಿಸಿದೆ; ಸ್ವಲ್ಪ ದಿನಗಳಿಂದ ವೆಂಕೂ ಮಂಕಾಗಿದ್ದಾಳೆ ಊಟ ತಿಂಡಿ ಒಂದೂ ಸರಿಯಾಗಿ ಮಾಡ್ತಾ ಇಲ್ಲ. ನೀನು ಅವಳನ್ನು ಸ್ವಲ್ಪ ಪರೀಕ್ಷೆ ಮಾಡಪ್ಪ ಅಂತ ಅಲವತ್ಕೊಂಡೆ. ನಾನು ಗುಡೀಲಿ

ಜೋರಾಗಿ ಮಂತ್ರ ಹೇಳೋದನ್ನ ಜನ ತಪ್ಪು ಅರ್ಥ ಮಡ್ಕತಿದಾರೆಂತ ವಿವರಿಸಿದೆ. ನಾಗ್ರಾಜ ಸ್ವಲ್ಪ ಹೊತ್ತು ಸುಮ್ಮನಿದ್ದು ನನ್ನ ಕಡೆ ತಿರುಗಿ 'ಹೌದು ನೀನು ಹೇಳೋದು ಸರಿ ಇರಬಹುದು. ನೀನು ಇದ್ನೆಲ್ಲಾ ಹೇಳಿದ ಮೇಲೆ ನನಗೆ ಈಗ ಡೆಫೆನಟ್ ಆಯ್ತು. ವೆಂಕೂ ಆರೋಗ್ಯ ಸ್ವಲ್ಪ ಚೆನ್ನಾಗಿಲ್ಲ - ಅವಳನ್ನು ಆಸ್ಪತ್ರೆಗೆ ಸೇರಿಸಿ ಟೆಸ್ಟ್‌ಗಳನ್ನು ಮಾಡ್ಸಿ, ಇಲಾಜು ಮಾಡಿಸ್ತೇನೆ... ನೀನೇನು ಯೋಚಿಸಬೇಡ. ನೀನು ಊರಿಗೆ ಹೋಗು... ಅಂತ ಸಮಾಧಾನ ಮಾಡಿದ.

ನಾನೊಬ್ಬನೆ ಹಿಂತಿರುಗಿ ಬಂದೆ. ಇದಿಷ್ಟು ಬೆಂಗ್ಳೂರು ಕಥೆ ಪ್ರಭು. ಆಚಾರಿ ಬಿಕ್ಕಳಿಸಿದ ಅತ್ತನೋ ನಕ್ಕನೋ ಪ್ರಾಣದೇವರಿಗೂ ತಿಳೀವಲ್ದು.

'ಅದ್ಸರಿ ಕಣೋ ಇದರೊಳಗೆ ನೀನು ವ್ಯಥಿಪಡೋವಂಥದೇನಿದೆ?' ಕೆಲವು ತಿಂಗಳು ನೀನು ಹಾಯಾಗಿರಬಹುದಲ್ಲೋ, ಮುಂಡೇದೆ?

ಮಾರುತಿಗೆ ಆಶ್ಚರ್ಯ ಕಾದಿತ್ತು.

'ನನ್ನ ವ್ಯಥೆಗೆ ಅದಲ್ಲ ಕಾರಣ ಪ್ರಭು. ಬಾಣಲೆಗೆ ಬಿದ್ದ ಜಿರಲೇನ ಬೆಂಕಿಗೆ ಒಗದಂಗ್ಹಾಗಿದೆ, ನನ್ನ ಪಾಡು. ನಾಗ್ರಾಜ - ಅದೇ ನನ್ನ ಭಾಮೈದ ಫೋನ್ ಮಾಡಿದ್ದ ಅಣ್ಣಯ್ಯಪ್ಪನ ಮನೆಗೆ: 'ಅಲ್ಲಿ ನೀನೊಬ್ಬನೆ ವದ್ದಾಡ್ತಿರ್ತಿಯ - ಮನೆಯ ಕೆಲಸ, ಗುಡಿ ಕೆಲಸ, ತಿಥಿ-ವೈಕುಂಠ ಅಂತ ಅತ್ತಿತ್ತ ಓಡಾಡಬೇಕಾಗುತ್ತೆ, ಮನೆ ನೋಡ್ಕಳೋಕೆ ನಮ್ಮಮ್ಮನ್ನೂ, ನನ್ನ ತಮ್ಮನ ಎರ್ಡು ಹೆಣ್‌ಮಕ್ಕಳ್ನೂ ಕಳುಹಿಸಿದೀನಿ ಇವತ್ತು ರಾತ್ರಿ ಬಸ್‌ನಲ್ಲಿ... ನೀನೇನೂ ವರಿ ಮಾಡ್ಕಬೇಡ...' ಅಂದ ಪ್ರಭು.'

ಈಗ ಮಾರುತಿಯ ಹೃದಯುದಲ್ಲಿ ಮಾನವೀಯ ಅನುಕಂಪವೆದ್ದಿತು: ಅಂದ್ರೆ ನಿಮ್ಮತ್ತೆ - ಕಾಡಮ್ಮ ಬರ್‍ತಾಳೇನೋ? ಛಿ..ಛಿ... ಹೋದ್ಸಲ ನಿನ್ನ ಮುಂಡಾಮೋಚಿಸಿ ಮನೇನ 'ಚೊಕ್ಕಟ'ಮಾಡಿ ಹಾದಿ ರಂಪ - ಬೀದಿ ರಂಪ ಮಾಡಿ ಹೋದಳಲ್ಲೋ, ಆ ಕಾಡಮ್ಮ ಅವ್ವು ಮತ್ತೆ ಬರ್‍ತಿದಾಳೇನೋ... ಛಿ... ಛಿ...!

''ಹೌದು ಪ್ರಭೂ... ಹೌದು.. ಅದೇ ಕಾಡಮ್ಮ ನನ್ನ ಕಾಡಿ, ಪ್ರಾಣ ತಿನ್ನೋ ನನ್ನ ಅತ್ತಿ!'

ಅನಂತಾಚಾರಿ ಈ ಸಲ ನಿಜವಾಗಿ ಬಿಕ್ಕಳಿಸಿ ಅತ್ತ 3/4 ಗಂಟೆಯಾದರೂ ಬಿಕ್ಕಳಿಕೆ ನಿಂತಿರಲಿಲ್ಲ.

( ಮೂಲ ಸ್ಫೂರ್ತಿ : ಜೇಬ್ಸ್‌ಥರ್ಬರ್)

# ಹಮೇಶಾ ಜವಾ....

– ಶ್ರೀನಿವಾಸ ವೈದ್ಯ

ಬೆಳಗಾವಿಯಿಂದ ಭೀಮೂಕಾಕಾ ಮುಂಝಾನೀ ಗಾಡೀಗೆ ಬೆಂಗಳೂರಿಗೆ ಬರವವರಿದ್ದರು. ಅದಕ್ಕಂತ ನಾನೂ ನನ್ನ ಗಂಡ ಶೀನೂ ಇಬ್ಬರೂ ಕೂಡಿ ಕಾಕನ್ನ ಕರಕೊಂಡು ಬರಲಿಕ್ಕೆ ಸ್ಟೇಷನ್‌ಕ್ಕ ಹೊರಟ್ವಿ.

ಭೀಮೂಕಾಕಾಗ ವಯಸ್ಸು ಅರವತ್ತೈದು. ಆದರೂ ಇನ್ನೂ ಚಿಗುರು ಮೀಶಿ ಹುಡುಗರ ಹಂಗ ಇರತಾರ. ಅವರ ಮಾತೂ... ಹರಟೀ... ನಗೀ... ತಮಾಶೀ... ಜ್ಯಾಷ್ಟೀ... ಒಂದsು ಎರಡsss, ಹೇಳೊ ಸೋಯಿ ಇಲ್ಲ. ಭೀಮೂ ಕಾಕಾ ಇದ್ದಲ್ಲೆ ನಗೀ ಇರತsದ, ಸಂತೋಷ ಚಲ್ಲುವರದಿರತದ. ಜೀವನ ಕುಣಿದು ಕುಪ್ಪಳಸತಿರತದ. ಕಾಕೂನೂ ಹಂಗsು. ಕಾಕಾಗsು ಹೇಳಿ ಮಾಡಿಸಿದ ಜೋಡಿ, ಅವರಿಬ್ಬರ ಹುಡುಗಾಟ, ಛೇಡಛಾಡ, ರಸಿಕತನ ನೋಡಿ ನಾವು ಸಣ್ಣವರು ಸಹಿತ ನಾಚಬೇಕು.

ನಾವು ಕಾಕಾನ ಅರವತ್ತೈದನೇ ಹುಟ್ಟು ಹಬ್ಬಕ್ಕೆ ಹೋದ ತಿಂಗಳ ಬೆಳಗಾವಿಗೆ ಹೋಗಿದ್ವಿ, ಅವತ್ತ ಅವರ ಮನ್ಯಾಗ ಏನು ಗದ್ದಲ ಏನು ಧಾಂದಲೇ! ಕಾಕಾ ಕಾಕೂ ಇಬ್ಬರೂ ಹೊಸ ಹೊಸಾ ಅರಿಬೀ ತೊಟಗೊಂಡು ಮದು ಮಕ್ಕಳ ಹಾಂಗ ಓಡಿಯಾಡಿದ್ದರು. ಕಾಕ ರಾತ್ರಿಯಿಡೀ ನಮ್ಮಂತಹ ಚಿಕ್ಕವರ ಸಂಗತೀ ಅಂತಾಕ್ಷರೀ ಹಾಡಿದ್ದರು, ಇಸ್ಪೀಟು ಆಡಿದ್ದರು, ಕಾಕೂನ ಕಣ್ಣ ತಪ್ಪಿಸಿ ಆಗಾಗ ಉಳಿದವರ ಸಂಗತೀ ಬೀರ ಗುಟಕರಿಸಿದ್ದರು. ಅಷ್ಟಾಗಿ ಮುಂಝಾನೆ ಆರು ಗಂಟೆಕ್ಕ ಯಲ್ಲಾರಕಿಂತ ಮದ್ಲ ತಾವೇ ಎದ್ದು ಚಹಾ ಮಾಡಿ, ತಾಟಿಗೆ ವಾಟಗಾ ಬಡಬಡದು ಘಂಟೀ ಬಾರಿಸಿ ಯಲ್ಲಾರನೂ ಚಹಾಕ್ಕ ಎಬ್ಬಿಸಿದ್ದರು.

ಹಂತಾ ಭೀಮೂಕಾಕಾನ್ನ ನೆನೆಸಿಕೋತ, ನಕ್ಕೋತ, ಗಾಡೀ ಹಾದೀ ನೋಡಿಕೋತ ನಾವು ಪ್ಲಾಟಫಾರ್ಮದ ಮ್ಯಾಲ ನಿಂತಿದ್ವಿ. ಗಾಡೀ ಬಂತು. ಕಾಕ ಇಳದರು ಆದರ ಅವರನ್ನ ನೋಡಿ ನಮ್ಮ ಎದೀ ಝುಲ್ಲಂದವು. 'ಆಶ್ಚರ್ಯಾಚಾಧಕ್ಕಾಚ ಬಸಲಾ' ಅಂತಾರಲ್ಲಾ ಹಂಗಾತು. ಭೀಮೂಕಾಕಾ ಗುರತ ಹತ್ತದವವರ್ಹಂಗ ಇಳದು ಹೋಗಿದ್ದರು. ಸೊರಗಿ ಖಡ್ಡಿ ಆಗಿದ್ದರು. ದೇಹ ಬಡವಾಗಿತ್ತು, ಮಾರಿ ಮಖಾಳಾಗಿತ್ತು, ಕಣ್ಣು ಒಳಗ ಸೇರಿಹೋಗಿದ್ದವು, ಹಣೀಮ್ಯಾಲ ನಿರಿಗೆ ಬೀಳಲಿಕ್ಕೆ ಹತ್ತಿದ್ದವು. ಅವರು ಹ್ಯಾಂಗ ಕಾಣಸತಿದ್ದರ ಅಂದರ ಅಳಮುರುಕ ಮರಾಠೀ ಪಿಕ್ಚರನ್ಯಾಗ ನಾಯಕ ಅಥವಾ ನಾಯಕೆಯ ಸೋದರ

ಮಾವ ಇರತಾನಲ್ಲ ಹಂಗ, ಅಥವಾ ನಮ್ಮ ಕನ್ನಡ ಪಿಕ್ಚರದಾಗ ಪಂತಲು ಅಳಬುರುಕ ರೋಲ ಮಾಡಿರತಾರಲ್ಲ ಹಂಗ ಕಾಣಸತಿದ್ದರು.

ನಾನೂ, ಶೀನೂ ಇಬ್ಬರೂ ಓಡಿ ಓಡಿ ಹೋಗಿ ಕಾಕನ ಪಾದಕ್ಕೆ ಬಗ್ಗಿ ನಮಸ್ಕಾರ ಮಾಡಿದೆವು. ನಾನು ತಡೀಲಾರದs ''ಕಾಕಾ, ಏನಿದು? ಇದ್ದಕ್ಕಿದ್ದಂಗ ಏನಾಗೇದ ನಿಮಗ?'' ಎಂದೆ. ನನ್ನ ಕಣ್ಣು ಆಗಲೇ ಹನಿಗೂಡಿದ್ದವು. ಅದಕ್ಕೆ ಕಾಕಾ ''ಅರವತ್ತೈದು ಆತಲ್ಲ ಪಮ್ಮೀ, ಇನ್ನು ಎಷ್ಟು ದಿವ್ಸ ನಿಮ್ಹಂಗ ಹುಡುಗರ್ಹಂಗ ಇರಬೇಕು?'' ಎಂದು ಒಂದು ಕ್ಷೀಣ ದುರ್ಬಲ ನಗು ನಕ್ಕರು. ನಾನು ''ಏನಾರs ಒಂದು ಹಾರಕೀ ಮಾತಾಡಬ್ಯಾಡರೀ ಕಾಕಾ ಹೋದ ತಿಂಗಳನs ನಿಮಗೆ ಅರವತ್ತೆದು ಆಗತ್ತಲ್ಲ?'' ಎಂದೆ. ಆವಾಗ ಇವರು-ಅಂದರ ಶೀನೂ - 'ಇಲ್ಲೆ ಬ್ಯಾಡಾ ಮನ್ಯಾಗ ಮಾತಾಡೋಣ' ಅನಕೋತ ಕಾಕಾನ ಬ್ಯಾಗು ತಕ್ಕೊಂಡರು. ಮನೀಗೆ ಬಂದ್ವಿ, ನಾನು ''ಕಾಕಾ ಬಿಸಿನೀರು ಅವ, ನೀವು ಸ್ವಲ್ಪ fresh ಆಗರೀ, ನಾ ಚಹಾ ಮಾಡತೇನಿ'' ಅಂದೆ.

ಕಾಕಾ ''ತ್ರಾಸ ತೊಗೋ ಬ್ಯಾಡ ಪಮ್ಮೀ ನಾ ಚಹಾ ಕಾಪೀ ಬಿಟ್ಟುಬಿಟ್ಟೇನಿ ಅದರಾಗ ಟಾಕ್ಸಿನ್ ಇರತsದ'' ಅಂದರು.

ನನಗ ಒಂಥರಾ ಖಿಜೀಲ ಅನಿಸಿತು. ಬೆಳಗಿನ ಚಹಾ ತಾವs ಮಾಡಿ ಮನಿ ಮಂದಿನ್ನೆಲ್ಲ ತಾವs ಎಬ್ಬಸೋ ಕಾಕಾ ಚಹಾ ಬಿಟ್ಟಾರ ಅಂದರ, ವಿಚಿತ್ರನs ಸೈ ಅನಕೊಂಡು ''ಹಂಗಾರ ಸ್ನಾನಾ ಮುಗಿಸಿ ಬರ್ರಿ. ಎಲ್ಲಾರಿಗೂ ಆಮ್ಲೇಟ್ ಟೋಸ್ಟ್ ಮಾಡಿಕೊಡತೀನಿ'' ಅಂದೆ.

ಅದಕ್ಕ ಕಾಕಾ, ''ಛೇ, ಛೇ ಹಂತಾ ತಾಮಸೀ ತಿನಸು ಎಲ್ಲಾ ಬಿಟಬಿಟೇನಿ'' ಅಂದರು ನನಗ ಏನು ಮಾಡಬೆಕೋ ತಿಳೀದs ಗೊಂದಲಗೆಟ್ಟು ನಿಂತಿದ್ದೆ. ಅಷ್ಟರಾಗ ಭೀಮೂಕಾಕಾ ಸ್ನಾನಾ ಮುಗಿಸಿ ಒಂದು ಗಿಡ್ಡ ಪಂಜಾ ಸುತಿಗೊಂಡು ದೇವರ ಮನೀ ಹೊಕ್ಕರು. ದೇವರ ಮನಿಯಿಂದ ಬಂದಳಲೇ, 'ಪಮ್ಮೀ, ಗಂಧ ಕೊರಡು ಎಲ್ಲ್ಯದ?... ಹೋಗಲಿ ಗೋಪೀ ಚಂದನನೂ ಇಲ್ಲೇನು?... ತೀರ್ಥ ಯದರಾಗ ತೆಗೀಬೇಕು?... ತಾಬಾಣ ಇಲ್ಲೇನು?... ಮನ್ಯಾಗ ತುಳಸಿ ಅರ ಅದನೋ ಇಲ್ಲೋ?' ಅನಕೋತ ಜೀವ ತಿನ್ನಲಿಕ್ಕೆ ಹತ್ತಿದರು. ಪಾಪ! ಸ್ವತಃ ನಮ್ಮ ಮನೀ ದೇವರs ಇವನ್ನೆಲ್ಲ ಎಂದೂ ಕಂಡಿದ್ದಿಲ್ಲ. ನಮ್ಮಂತಹ ನೌಕರದಾರ ಮನೀ ದೇವರು ಹೆಂಗ ಇರಬೇಕೋ ಹಂಗ ದೇವರ ಮನೀ ಒಳಗ ಥಣ್ಣಗಧೂಳಾ ತಿನಕೋತ ಕೂತಿದ್ದ.

ಅವತ್ತ ಇಡೀ ದಿವ್ಸ ಭೀಮೂಕಾಕಾ ಹಿಂಗಽ ಹುಚ್ಚ ಹುಚ್ಚರಹಂಗ ಇದ್ದರು. ಬ್ರೇಕ್‌ಫಾಸ್ಟ್ ಬ್ಯಾಡಾ ಅಂದು ಒಮ್ಮಿಗೇಲೆ ಊಟಕ್ಕ ಕೂತರು. ಅದೂ ನೆಲದ ಮ್ಯಾಲ ಶರಟು ಬಿಚ್ಚಿ ಕೂತರು! ಆ ಚಿತ್ರಾವತಿ ತಿರುವುದೇನು, ಊಟದ ನಡುವೆ ನಡನಡುವೆ 'ನಾರಾಯಣ... ನಾರಾಯಣ' ಅನ್ನೋದೇನು, ತೀರ ಅಸಹ್ಯಕ್ಕ ಇಟ್ಟಿತು. ನನಗೆ ಕಣ್ಣಾಗ ನೀರು ಬಂದವು, 'ಇವರಽ ಏನು ನಮ್ಮ ಭೀಮುಕಾಕಾ, ಮಕ್ಕಳಾಗ ಮಕ್ಕಳಾಗಿ, ಹುಡುಗರಾಗ ಹುಡುಗರಾಗಿ ಬಾಳಿನ ಪ್ರತಿಕ್ಷಣವನ್ನೂ ಬಿಡದೇ ಸವಿಯುವ, ನಕ್ಕು ನಲಿದು, ನಲಿವಿನ ಹೊಳೆ ಹರಿಸುವ ಭೀಮೂಕಾಕಾ ಇವರಽ ಏನು?' ಅನಿಸಿತು.

ಅವತ್ತ ಮಧ್ಯಾನ್ಹದಾಗನಕಾ ಭೀಮೂಕಾಕಾನ ಹುಚ್ಚು ವಿಕೋಪಕ್ಕೆ ಏರಿತು. ನಾ ದಿನಧಂಗ ಮಧ್ಯಾನ್ಹ ಒಂದು ತಾಸು ಮಲಗಿ ಎದ್ದು ಚಹಕ್ಕೆ ಎಸರು ಇಡಬೇಕೆಂತ ಬಂದರ ಕಾಕಾ ಹಾಲಿನ್ಯಾಗ ಒಂದು ಚಾಪಿ ಹಾಸಿಕೊಂಡು ಕೂತು, ಒಂದು ಸಣ್ಣ ಫೋಟೋ ಇಟಗೊಂಡು ಗುರು-ಚರಿತ್ರ ಅನಕೋತ ಕೂತಿದ್ದರು!

ಇದು ಅತಿ ಆತು ಅನಕೊಂಡು ಸಂಜೀಗೆ ಶೀನೂ ಆಫೀಸಿನಿಂದ ಮನೀಗೆ ಬರುತಲೇ, ನಾ ಭೀಮೂಕಾಕಾನ ಹುಚ್ಚಾಟಯಲ್ಲಾ ಅವರಿಗೆ ಹೇಳಿಬಿಟ್ಟೆ, ಪಾಪ, ಅವರೂ ಘಾಬರ್‍ಯಾದರು, ರಾತ್ರಿ ಊಟಕ್ಕ ಕೂತಾಗ ಮಾತಾಡೋಣ ಅಂದರ, ಕಾಕಾ 'ನಾ ರಾತ್ರಿ ಊಟ ಬಿಟ್ಟು ಬಿಟ್ಟೇನಿ' ಅಂದರು. ಕಡೀಕ, ಇವರೇ ಅಂದರ ಶೀನೂ, ತಾಳಲಾರದೇ ''ಏನಿದು ಕಾಕಾ ಹಿಂಗ್ಯಾಕ ಮಾಡಲಿಕ್ಕೆ ಹತ್ತೀರಿ? ನಮ್ಮಿಂದ ಏನಾರ ತಪ್ಪ ಆಗಿದ್ದರ ಹೇಳರಿ ತಿದ್ದಿಕೋತೇವಿ. ಅದನ್ನೆಲ್ಲ ಬಿಟ್ಟು ಹಿಂಗ ಮಾಡಿದರ ಹೇಂಗ? ಅಲ್ಲ... ನೀವು ಬರತೀರ ಅಂಥೇಳಿ, ಇಂಪೋರ್ಟೆಡ್ ಬೀರು, ಸಿಗರೇಟು ತರಿಸಿ ಇಟ್ಟೇನಿ... ಮರ್ಲಿನ್ ಮನ್ರೋಂದು ಹಳೆ ಪಿಕ್ಚರ 'ನಾಯಗರ' ಬಂದದ ರೆಕ್ಸದಾಗ, ನಾಳಿನ ಟಿಕೀಟ ತಗಸಬೇಕಂತೇನಿ, ಶುಕ್ರವಾರ ಕ್ಲಬ್‌ನ್ಯಾಗ ಊಟ ಮಾಡೋಣಾಂತ, ಶನಿವಾರ ಆದಿತ್ಯವಾರ ನಂದೀಗೆ ಹೋಗೋಣಂತಽ ಅಂತ ನಾವು ಏನೇನೋ ಪ್ಲ್ಯಾನ್ ಹಾಕಲಿಕ್ಕೆ ಹತ್ತೇವಿ, ಹಂತಾದರಾಗ ನೀವು ಹೀಂಗ ಪಂಚಾ ಉಟಕೊಂಡು ಕೂತರ ಹ್ಯಾಂಗ? ಹಂತಾದ್ದು ಏನಾಗೇದ ಈಗ? ಮೈಯಾಗ ಆರಾಮ ಅದನೋ ಇಲ್ಲೋ? ಏನಿದ್ದರೂ ಮುಚ್ಚಿಟಗೋಬ್ಯಾಡ್ರಿ, ಹೇಳ್ರಿ, ಬೆಂಗಳೂರಾದ ಹೆಂತಂತ ಡಾಕ್ಟರ ಇದ್ದಾರ ಇದ್ದದ್ದು ಇಲ್ಲದ್ದು ಜಡ್ಡುಯಲ್ಲಾ ಗುಣಮಾಡತಾರ... ಏನ ಆಗೇದ ಅದನ್ನಾರಽ ಹೇಳ್ರಿ'' ಎಂದು ಯಷ್ಟೊಂದು ಚಾಲವರದರೂ, ಭೀಮೂಕಾಕಾಂದು ಒಂದಽ ಹಾಡು ''ಇನ್ನೆಷ್ಟು ದಿವ್ಸ ನಿಹ್ಮಂಗ ಹುಡುಗರ ಹಂಗ ಇರಬೇಕು? ಮುಗೀತಲ್ಲ ಇನ್ನ ಯಲ್ಲಾ ಮುಗೀತು'' ಅನ್ನೋದು, ಗಳಿಗೆಗೊಮ್ಮೆ ''ಮುಗೀತು... ಮುಗೀತು'' ಅನಕೋತ ದೀರ್ಘ ನಿಟ್ಟುಸಿರು ಬಿಡೋದು.

ನಮ್ಮಿಬ್ಬರಿಗೂ ವಿಪರೀತ ಹೆದರಿಕೆ ಹುಟ್ಟಿಕೊಂಡುಬಿಟ್ಟಿತು. 'ಇವರಿಗೆ ಆಗೇದರS ಏನು? ಕಾಕಾ ಬಂದಾಗ ಎಷ್ಟು ಸಂತೋಷದಿಂದ ಇರಬೇಕಂತ ಮಾಡಿದ್ವಿ, ಹಂತಾದು ಒಮ್ಮಿಂದೊಮ್ಮಿಗಲೇ ಹೀಂಗ್ಯಾಕಾತು?' ಅನಕೋತ ಒದ್ದ್ಯಾಡಿದಿವಿ.

ಎರಡು ದಿವ್ಸ ತಡಕೊಂಬೋದರಾಗ ನನಗ ಸಾಕುಸಾಕಾತು. ಮೂರನೇ ದಿನ ಸಂಜೀನ್ಯಾಗ ಇವರು ಇನ್ನೂ ಆಫೀಸಿನಿಂದ ಬಂದಿದ್ದಿಲ್ಲಾ; ಭೀಮೂಕಾಕಾ ದೇವಸ್ಥಾನಕ್ಕೆ ಹೋಗಿದ್ದರು. ನಾ ಅಗದೀ ನಾಯಿಲಾಜ ಆಗಿ ಬೆಳಗಾವಿಗೆ ಕಾಕೂಗ ಫೋನ ಮಾಡಿದೆ.

''ಹಲೋ.. ಯಾರು ಕಾಕು ಏನು?... ನಾ ಪಮ್ಮಿ'' ಎಂದೆ.

''ಹಲೋ... ಹೇಳ ಪಮ್ಮೀ... ಯಲ್ಲಾ ಆರಾಮS?'' ಎಂದರು ಕಾಕೂ. ವಿಚಿತ್ರವೆಂದರೆ ಅವರ ದನಿಯಲ್ಲಿ ಎಂದಿನ ಸಂತಸ, ಉತ್ಸಾಹವೇ ತುಂಬಿ ತುಳುಕುತ್ತಿತ್ತು.

''ಕಾಕೂ, ಭೀಮೂಕಾಕಾಗ ಏನಾಗೇದ?'' ಕೇಳಿದೆ.

''ಅವರಿಗೇನಾಗೇದ ಆರಾಮನS ಇದ್ದಾರಲ್ಲ'' ಎಂದರು ಕಾಕೂ ಶಾಂತಚಿತ್ತದಿಂದ.,

''ಅಲ್ಲ ಕಾಕೂ, ನೀ ಇಷ್ಟದಿವಸ ನೋಡೇ ಇಲ್ಲೇನು? ಕಾಕಾ ಮೊದಲಿನ ಹಾಗೆ ಇಲ್ಲಲ್ಲSS...'' ಎಂದೆ.

''ಅವರಿಗೇನಾಗೇದ, ನೆಟ್ಟಗನS ಇದ್ದಾರಲ್ಲ?'' ಎಂದರು ಕಾಕೂ ಅದೇ ರಾಗದಲ್ಲಿ.

''ಅಲ್ಲ ಕಾಕೂ, ಅದೇನು ಪಂಜಾ ಹಚಿಕೋಡಾರ, ಪೂಜೀ... ಪುನಸ್ಕಾರ... ಗುರುಚರಿತ್ರ ಓದೋದೇನು.... ರಾತ್ರಿ ಊಟಾ ಬಿಟ್ಟಾರಂತSSS ಇದೆಲ್ಲ ಯಾಕೆSS ತೀರS ಅತೀ ಆತಲ್ಲೇನು?'' ಎಂದೆ ನಾನು.

''ಅದSS... ನೀ ಏನು ಕಾಳಜೀ ಮಾಡಬ್ಯಾಡ... ನಾಕ ದಿವ್ಸ ಆತಂದರ ತಮ್ಮಷ್ಟಕ್ಕೆ ತಾವS ನೆಟ್ಟಗಾಗತಾರS'' ಎಂದರು ಕಾಕೂ ಅದೇ ಶಾಂತಚಿತ್ತದಿಂದ.

''ಕಾಕೂ... ಮುಚ್ಚಿಟಗೋಬ್ಯಾಡಾ, ಭೀಮೂ ಕಾಕಾಗ ಆಗೇದರS ಏನು'' ಎಂದೆ ನಾನು.

ಆವಾಗ ಕಾಕೂ, ''ಹಂತಾದ್ದೇನೂ ಆಗಿಲ್ಲ ಪಮ್ಮಿ... ಈಗ ಒಂದ ಹದಿನೈದು ದಿವಸ್ಸದ ಹಿಂದೆ ಮಾಧುರಿ ದೀಕ್ಷಿತ ಯಾರನೊ ಲಗ್ನ ಮಾಡಿಕೊಂಡಳು ಅಂತ ಪೇಪರಿನ್ಯಾಗ ಓದಿ, ಅವತ್ತಿನಿಂದ ಹಿಂಗ ಮಾಡಲಿಕ್ಕೆ ಹತ್ಯಾರ'' ಎಂದರು ನಿರ್ಲಕ್ಷ್ಯದಿಂದ.

ನನಗ ನಗಬೇಕೋ, ಅಳಬೇಕೋ ತಿಳೀದಾತು, ''ಕಾಕೂ ಎಷ್ಟು ಸಹಜಾಸಹಜೀ ... ಶಾಂತರೀತಿಯಿಂದ ಹೇಳತೀಯಲ್ಲ... ಕಾಕಾ ಅತೀ ಮನಸ್ಸಿಗೆ ಹಚ್ಚಿಗೊಂಢಂಗ ಕಾಣಸ್ತದ ಬಿಡು... ನೀ ಏನು ಮಾಡ್ಲಿಲ್ಲೇನು'' ಎಂದು ಕೇಳಿದೆ ಕಾತರದಿಂದ.

''ಇದೆಲ್ಲ ಗಂಡಸರ ಹುಚ್ಚು ಪಮ್ಮಿ... ನಾಕ ದಿನ ಇರತೆಽದ ಹೋಗತೆಽದ... ನೀ ಭಾಳ ಘಾಬರ್‍ಯಾಗಬ್ಯಾಡ... ಅಷ್ಟಲ್ಲದ ಈ ಹುಚ್ಚು ಅವರಿಗೆ ಹೆರಡಿಟಿ... ವಂಶ ಪಾರಂಪರ್ಯದಿಂದ ಅದ....'' ಎಂದರು ಕಾಕೂ.

''ಅಂದರ....?'' ನಾನು ಕುತೂಹಲದಿಂದ ಕೇಳಿದೆ.

''ಅಂದರಽಽ... ಮೂವತ್ತು ಮೂವತ್ತೈದು ವರುಷದ ಹಿಂದೆ ನಾ ಅದೆಽ ಹೊಸತಾಗಿ ಲಗ್ನ ಮಾಡಿಕೊಂಡು ಇವರ ಮನೀಗೆ ಬಂದಾಗ ನಮ್ಮ ಮಾವನವರಿಗೂ ಹೀಂಗಽ ಆಗಿತ್ತು'' ಕಾಕೂ.

ಇದೊಳೇ ಪತ್ತೇದಾರಿ ಕಥೀ ಹಾಗ ಬಿಚಿಗೋಳ್ಳಿಕ್ಕೆ ಹತ್ತಿತು ಅಂತ ನಾನು ಆಶ್ಚರ್ಯದಿಂದ ''ಆವಾಗ ಏನಾಗಿತ್ತು ನಿಮ್ಮ ಮಾನವರಿಗೆ?'' ಎಂದೆ.

''ಏನಿಲ್ಲ... ಆವಾಗ ನರಗೀಸನ ಲಗ್ನ ಆಗಿತ್ತಲ್ಲ... ಆವಾಗ ನಮ್ಮ ಮಾವನವರಿಗೂ ಹೀಂಗಽ ಆಗತ್ತು'' ಎಂದರು ಕಾಕೂ.

''ಆವಾಗ ನಿಮ್ಮ ಅತ್ತಿ ಏನು ಮಾಡಿದರು?'' ನಾ ಕೇಳಿದೆ.

''ಏನಿಲ್ಲ ನಾಲ್ಕು ಹೊಸಾ ಕಸಬರೀಗೀ ತಂದು ಒಂದಾದಮ್ಯಾಲ ಒಂದರ್ಹಂಗ ಇಕ್ಕರಿಸಿದರು. ನಾಲ್ಕನೇ ಕಸಬರಗಿ ಸವೆದು ಹರಿಯೋದರಾಗ, ಮಾವನವರು ಮೊದಲಿನಹಂಗ ನೆಟ್ಟಗಾದರು'' ಕಾಕೂ ವಿವರಿಸಿದರು.

''ಮತ್ತೆ ನೀನು ಯಾಕ ಹಂಗ ಮಾಡ್ಲಿಲ್ಲಽ ಕಾಕೂ?'' ನಾ ಕೇಳಿದೆ.

''ಛೀ ಘುಚ್ಚಿ ಇದೆಲ್ಲ ಗಂಡಸರ ಹುಚ್ಚು... ನಾಕ ದಿವ್ಸ ಇರತಾವ ಹೋಗತಾವ... ನೆಗಡಿ ಖೆಮ್ಮು ಇದ್ಧಂಗ. ಅದಕ್ಕ ಕಸಬರಿಗಿ ಯಾಕ ಹಾಳಮಾಡಬೇಕು... ಅಲ್ಲದೇ ಈಗ ಕಸಬರಿಗಿ ಎಷ್ಟು ತುಟ್ಟಿ ಆಗ್ಯಾವ ಏನು ಕಥಿ...'' ಎಂದರು ಅನುಭವಸ್ತೆ ಕಾಕೂ.

''ನೀನೂ ಘಟ್ಟಿ ಬಿಡು ಸಮ್ಮವ್ವಾ...'' ಎಂದು ನಾನು ಹೇಳುತ್ತಿದ್ದಂತೆಯೇ ಹೊರಗಿನಿಂದ ಭೀಮೂಕಾಕಾ ಚಪ್ಪಲಿ ಸೊಪ್ಪಳ ಮಾಡಿಕೋತ ಬಂದರು.

ಮುಂದ ಮೂರುನಾಕ ದಿವ್ಸ ಕಾಕಾ ಇದS ರೀತಿ ಪಂಜಾ, ಪೂಜಾ, ಗುರುಚರಿತ್ರ, ಜಾಪಿ, ತುಳಸಿ ಅನಕೋತ ತಾವೂ ಒದ್ದ್ಯಾಡಿ ನಮ್ಮನ್ನೂ ಒದ್ದ್ಯಾಡಿಸಿದರು.

ಅವತ್ತೊಂದು ದಿನ ಸಂಜೀಕೆ ಶೀನೂ ಇನ್ನೂ ಆಫೀಸಿನಿಂದ ಬಂದಿರಲಿಲ್ಲ, ಭೀಮೂಕಾಕಾ ಹೊರಗ ಹಾಲಿನ್ಯಾಗ ಟಿ.ವ್ಹಿ. ನೋಡಿಕೋತ ಕೂತಿದ್ದರು. ನಾ ಕಿಚನ್‌ದಾಗ ಅಡಿಗೀ ಮಾಡಿಕೋತ ನಿಂತಿದ್ದೆ. ಆವಾಗ ಇದ್ದಕ್ಕಿದ್ದಂಗ ಕಾಕಾ ''ಪಮ್ಮೀ... ಬಾ ಇಲ್ಲೆ...'' ಎಂದು ಗಟ್ಟಿಯಾಗಿ ಕರೆದರು. ನಾ ಹೋದೆ. ಕಾಕಾ ಟಿವ್ಹಿಯೊಳಗೆ ಏಕಾಗ್ರಚಿತ್ತದಿಂದ ಕಣ್ಣುನೆಟ್ಟು ಕೂತವರು, ಟಿವ್ಹಿಯಿಂದ ಕಣ್ಣು ಕೀಳದೇ ''ಈ ಹುಡುಗಿ ಯಾರು?'' ಎಂದರು. ನಾನು ನೋಡಿದೆ, ಊರ್ಮಿಳಾ ಮಾತೋಂಡಕರ, ಗಂಡಸರದೊಂದು ಅಂಗೀ ಹಾಕ್ಕೊಂಡು ನಾಲ್ಕರ ಛಳಿ ಬಂದವರಹಂಗ, ಮ್ಯಾಲಿಂದು ಮ್ಯಾಲೆ, ಕೆಳಗಿಂದು ಕೆಳಗS ಹೊಯ್ದಾಡಿಸಿಕೋತ ಕುಣೀಲಿಕ್ಕೆ ಹತ್ತಿದ್ದಳು.

''ಕಾಕಾ, ಇಕೀ ಊರ್ಮಿಳಾ ಮಾತೋಂಡಕರ ಅಂತ... ಈಗೀಗ ಬಹಾಳ ಪಾಪ್ಯುಲರ್ ಆಗಲಿಕ್ಕೆ ಹತ್ಯಾಳ'' ಎಂದೆ.

ಟಿವ್ಹಿಚಿತ್ತ ಕಾಕಾ ''ಆಗದ ಏನು?... ಮಾರೀ ನೋಡಿದರS ತಿಳೀತದ ಇದು ರತ್ನಾಗರೀ ಹುಡಿಗೀ ಅಂತ... ಇಲ್ಲಾ ಸಿ.ಕೆ.ಪಿ. ಅಥವಾ ಕೊಂಕಣಸ್ತ ಇರಬೇಕು... ಆಹಾ ಆಹಾ... ಆ ಮಾರೀಮಾಟ... ಆ ಬೆಕ್ಕಿನ ಕಣ್ಣು ಅವS ಹೇಳತಾವ ಈ ಹುಡುಗಿ ಇಲ್ಲಾ ಅಸ್ಸಲ ಪುಣೇರಿ, ಅಥವಾ ರತ್ನಾಗರೀ ಅಂತ... ನಾವು ಕಾಲೇಜದಾಗ ಇದ್ದಾಗ ನನ್ನ ಕ್ಲಾಸಮೇಟ ಒಬ್ಬಾಕಿ 'ಶರಯೂ ಗುಪ್ತೆ' ಅನ್ನೋ ಹುಡುಗಿ ಥೇಟ ಹೀಂಗS ಇದ್ದಳು...'' ಎಂದು ತಾತಾ ಮತ್ತ ಟಿವ್ಹಿಯ ಧುಂಧಿಯೊಳಗನS ''ಮೇರೆ ಪಿಯಾ ಗಯೆ ರಂಗುನ.... ಕಿಯಾ ಹೈ ವಹಾಸೆ ಟೆಲಿಫೋನ'' ಎಂದು ಯಾವದೋ ಹಳೆಯ ಕಾಲದ ತಮ್ಮ ಜವಾನೀ ಹಾಡು ಗುಣಗುಣಸಲಿಕ್ಕೆ ಹತ್ತಿದರು.

ನಾನು ನೋಡ ನೋಡುತ್ತನS ಕಾಕಾನ ಕಣ್ಣಾಗಿನ ಕಾಂತಿ ಮರಳಿ ಬರಲಿಕ್ಕೆ ಹತ್ತಿತ್ತು... ಮುಖದ ಸುಕ್ಕು ಸಡಿಲಗೊಳ್ಳಲಿಕ್ಕೆ ಹತ್ತಿದ್ದವು ತುಟಿಯೊಳಗಿನ ತುಂಟನಗಿ ಮರುಕಳಿಸಲಿಕ್ಕೆ ಹತ್ತಿತ್ತು... ಹಣೀಮ್ಯಾಲಿನ ಗಂಟು ಬಿಚ್ಚಿಗೊಳ್ಳಲಿಕ್ಕೆ ಹತ್ತಿದ್ದವು. ಅರವತ್ತೈದರ ಭೀಮೂಕಾಕಾ ಯೌವನಕ್ಕ ಮರಳಿ ಪ್ರವೇಶಿಸುವ

ಪ್ರಕ್ರಿಯಾ ಮೆಲ್ಲ ಮೆಲ್ಲನೇ ಸುರೂ ಆಗತ್ತು. ಕಾಕಾ ಹೌರಗs ಮೀಶಿ ಮ್ಯಾಲ ಕೈಯಾಡಸಲಿಕ್ಕ ಹತ್ತಿದರು. ನಾನು ಮುಗುಳು ನಕ್ಕೋತ ಕಿಚನ್‌ದ ಕಡೆಗೆ ನಡೆದೆ.

ಒಂದು ಸಲ್ಪ ಹೊತ್ತು ಬಿಟ್ಟು ಕಾಕ ಮತ್ತ ''ಪಮ್ಮೀ...'' ಎಂದು ಕರೆದರು ನಾನು ಏನೆಂದು ಹೊರಗೆ ಬಂದಾಗ ಕಾಕಾ ಕಣ್ಣುಗಳಿಂದ ಟಿ.ವ್ಹಿಯನ್ನು ಆಪೋಶನ ತೊಗೊಳ್ಳಿಕ್ಕೆ ಹತ್ತಿದ್ದರು. ಊರ್ಮಿಳಾ ಇನ್ನೂ ಹೊಯ್ದಾಡಲಿಕ್ಕೆ ಹತ್ತಿದ್ದಳು. ಆಗ ಕಾಕಾ ನನಗ ''ಏನಿಲ್ಲ ನಿನ್ನ ಗಂಡ ಶೀನೂ ಇಂಪೋರ್ಟೆಡ್ ಬೀರ ತಂದೇನಿ ಅಂದಿದ್ದ... ಅದs ಏನು ಸ್ವಲ್ಪ...'' ಎಂದರು.

ನಾನು ಸಂತಸದಿಂದ ಫ್ರಿಜ್ಜು ತೆಗೆದು ಬೀರು ಮತ್ತು ಮಗ್ಗು ತಂದು ಕಾಕಾನೆದುರು ಇಟ್ಟು 'ಕಟ್ಟೆಯ ಕಲ್ಲು ಕಟ್ಟೆಗೆ ಕುಳಿತ' ಸಂತಸದಲ್ಲಿ ಒಂದು ದೀರ್ಘ ಹಗೂರು ನಿಟ್ಟುಸಿರು ಬಿಡುತ್ತಾ ಒಳನಡದೆ.

★★★

ನೀತಿ: ಯಾರ ಹ್ಯಾಂಗ ಇರಬೇಕೋ ಅವರು ಹಂಗ ಇದ್ದರs ಛಂದ.




''ನಿಮ್ಮ ಮುಖ ನೋಡಿದ್ರೆ, ರಾಜ ಕಳೆ ಇದೆ ಸಾರ್, ಖಂಡಿತ ಕಾಡಿನ ಕಡೆ ಹೋಗಬೇಡಿ, ಯಾರಾದರೂ ಅಪಹರಿಸಿಬಿಟ್ಟಾರು''

# ಧನುಷ್ಕದ ವೃತ್ತಾಂತ

– ಶಿವು

## ಸ್ವರ್ಗದಲ್ಲೊಂದು ಸಂಧಿಗ್ಧ

''ಈಗೇನು ಮಾಡೋಣ ಅಂತೀ ಗುರೂ'' ಇಂದ್ರ, ಬೃಹಸ್ಪತಿಯನ್ನು ಕೇಳಿದ.

''ಪರಿಸ್ಥಿತಿ ಬಹಳ ಸೂಕ್ಷ್ಮವಾಗಿದೆ ಇಂದ್ರದೇವ. ಎಲ್ಲಾ ಸಾಧ್ಯತೆಗಳನ್ನೂ ಕೂಲಂಕಷವಾಗಿ ಪರಿಶೀಲಿಸಿ ಮುಂದಿನ ಹೆಜ್ಜೆ ಇಡಬೇಕಾದದ್ದು ಅನಿವಾರ್ಯ''

ದೇವ ಗುರುವಿನ ಈ ಅಡ್ಡಗೋಡೆ ಉತ್ತರ ಇಂದ್ರನ ಕದಡಿದ ಮನಕ್ಕೆ ಸಾಂತ್ವನ ತರುವುದರಲ್ಲಿ ವಿಫಲವಾಯಿತು.

''ಹಾಗೆಂದರೆ ಹೇಗೆ ಗುರೂ, ಇಂದ್ರಲೋಕ ಈಚೀಚೆಗೆ ಭೂಲೋಕಕ್ಕಿಂತಾ ಹದಗೆಟ್ಟು ಹೋಗಿದೆ. ಕಿನ್ನರರಿಗೆ ಅವರದ್ದೇ ಪ್ರತ್ಯೇಕ ರಾಜ್ಯ ಬೇಕಂತೆ. ಕಿಂಪುರುಷರೋ 78 ಪರ್ಸೆಂಟ್ ಮೀಸಲಾತಿ ಇಲ್ದೇ ಇದ್ರೆ ಮಾತೇ ಆಡಿಸ್ಬೇಡಿ ಅಂತ ಸಡ್ಡು ಹೊಡೆದು ನಿಂತಿದಾರೆ. ಅಪ್ಸರೇರೂ ಸಹಾ ಓವರ್ ಟೈಮ್ ಕೇಳ್ತಿದಾರೆ ಅಂದ್ರೆ, ನಗಬೇಕೋ ಅಳಬೇಕೋ ತಿಳೀತಿಲ್ಲ. ಇಷ್ಟೆಲ್ಲ ತಲೆಬಿಸಿ ಇರೋವಾಗ, ಈಗ, ಈ ಗಂಧರ್ವಲೋಕದ ಗಂಭೀರ ಪರಿಸ್ಥಿತಿ...''

ಬೃಹಸ್ಪತಿಯ ಅಂತಃಕರಣ ಕಲಕಿತು. ಒಂದು ಕಾಲದಲ್ಲಿ ಸ್ವರ್ಗ ಅಂದರೆ ಹೇಗಿತ್ತು! ಇಂದ್ರ, ತನ್ನ ಸಿಂಹಾಸನದಲ್ಲಿ ಠೀವಿಯಿಂದ ವಿರಾಜಮಾನನಾಗಿದ್ದಾನೆ, ಸಭಾಸದರು ತಮ್ಮ ಸ್ಥಾನಗಳಲ್ಲಿ ಕುಳಿತು ಸುವರ್ಣ ಕಲಶಗಳಿಂದ ಅಮೃತವನ್ನು ಹೀರುತ್ತಾ ಅಪ್ಸರೆಯರ ಆಗಮನವನ್ನು ಇದಿರು ನೋಡುತ್ತಿದ್ದಾರೆ, ಅಗೋ, ತಿಲೋತ್ತಮೆ ಪೂರ್ವದ್ವಾರದಿಂದ ಹಂಸದಂತೆ ತೇಲುತ್ತಾ ಒಳಗೆ ಬಂದು ತನ್ನ ಮುಂದೆ ಹಾದು ಹೋಗುವಾಗ ಅಕಸ್ಮಾತ್ತಾಗಿ ಅವಳ....

''ಯಾಕೆ ಬೃಹಸ್ಪತಿ, ತೇಲುಗಣ್ಣಾಗಿದೆ, ಅಶ್ವಿನಿಗಳನ್ನು ಕರೆಸಲೇ?'' ಇಂದ್ರನ ಕಳಕಳಿಯ ನುಡಿ ದೇವಗುರುವನ್ನು ದಿಢೀರನೆ ವರ್ತಮಾನಕ್ಕೆ ಕೆಡವಿತು.

''ಹಾಗೇನಿಲ್ಲ ಇಂದ್ರದೇವ, ನಮ್ಮ ಗತಕಾಲದ ವೈಭವ ನೆನಪಿಗೆ ಬಂದು... ಅದಿರಲಿ, ಈಗ ನಮ್ಮ ಮುಂದಿರುವ ಜ್ವಲಂತ ಸಮಸ್ಯೆ ಕುರಿತು ನನ್ನ ಅಭಿಪ್ರಾಯವನ್ನು ನೀವು ಕೇಳಿದಿರಲ್ಲವೇ, ಆಗಲಿ ಹೇಳಿಯೇ ಬಿಡುತ್ತೇನೆ.

ಇದಕ್ಕೆಲ್ಲಾ ಮೂಲ ಕಾರಣ ನಿಮ್ಮ ಸಡಿಲವಾದ ಆಡಳಿತ. ಹಾಗಲ್ಲವಾದಲ್ಲಿ, ರಾಕ್ಷಸರು ಸ್ವರ್ಗಲೋಕವನ್ನು ಪ್ರವೇಶಿಸುವುದು ಅಂದರೇನು! ಪ್ರವೇಶಿಸಿ, ಗಂಧರ್ವರ ಕನ್ಯಾಮಣಿ....''

''ಶ್ ಶ್ ಗುರುವರ್ಯ, ಕಂಭಗಳಿಗೂ ಕಿವಿಗಳಿರುವ ಕಾಲ ಇದು. ಕಡಿಮೆ ಮಾತನಾಡಿದಷ್ಟೂ ಕ್ಷೇಮ. ನನ್ನ ಆಡಳಿತವನ್ನ ದೂಷಿಸಿ ಏನು ಪ್ರಯೋಜನ. ಸ್ವರ್ಗ ಅಂದಮೇಲೆ ಸ್ವರ್ಗಸುಖ ಅನುಭವಿಸಬೇಕಾದ್ದು ಸಹಜ ತಾನೇ. ಸ್ವರ್ಗದ ಅಧಿಪತಿಯಾದ ನಾನೇ ಇದಕ್ಕೆ ಮೇಲ್ಪಂಕ್ತಿ ಹಾಕೋಣ ಅಂತ ಸ್ವಲ್ಪ ಮಜಾ ಮಾಡ್ದೆ ಅಷ್ಟೇ. ಅಷ್ಟಕ್ಕೆ ಪರಿಸ್ಥಿತಿ ಇಷ್ಟು ಹದಗೆಡುತ್ತೇ ಅಂತ ಯಾರು ಕನಸು ಕಂಡಿದ್ದರು?''

''ಅದೆಲ್ಲಾ ಹಿಂದಿನ ಕಾಲಕ್ಕೆ ಸರಿಹೋಯ್ತು. ಈಗ ಚೌಲ್ಟ್ರಿ ಕಟ್ಟಿಸ್ದ, ನಲ್ಲಿ ಹಾಕಿಸ್ದ, ಗರೀಬೀ ಹಟಾವ್ ಮಾಡಿದ್ಲು ಅಂತ ಕಂಡ ಕಂಡೋರ್ನೆಲ್ಲಾ ಸ್ವರ್ಗಕ್ಕೆ ಸೇರಿಸ್ಕೊಂಡ್ರಿ, ಅವ್ರೆಲ್ಲಾ ಬಂದು ತಮ್ಮ ಭೂಲೋಕದ ಚಾಳೀನೆಲ್ಲಾ ಇಲ್ಲಿ ಹರಡುಕ್ಕೆ ಶುರುಮಾಡಿದಾರೆ. ಅದಿರಲಿ, ನಿನ್ನೆ ಗಂಧರ್ವರ ಮುಖಂಡ ಕಿರಣಾಕ್ಷ ನಮಗೆ ಒಂದು ಅಲ್ಟಿಮೇಟಮ್ ಕಳಿಸಿದ್ದಾನೆ. ಇನ್ನು ಒಂಭತ್ತು ದಿನಗಳಲ್ಲಿ ಅವರ ಅನಭಿಷಿಕ್ತ ಗುರು ಧನುಷ್ಕದನನ್ನು ರಾಕ್ಷಸರಿಂದ ಬಿಡಿಸಿಕೊಂಡು ಬರದದ್ದಿರೆ ಸೂರ್ಯ, ಚಂದ್ರರ ಪಥದಲ್ಲಿ ರಾಸ್ತಾರೋಖೋ ಮಾಡುತ್ತಾರಂತೆ''

''ಅಯ್ಯೋ ದೇವರೆ, ಎಂತಹ ಆಪತ್ತು! ಈಗೇನು ಮಾಡೋಣಾ ಅಂತೀ ಗುರೂ?''

''ಏನು ಮಾಡೋದು ಅಂತ ನನಗೂ ತೋಚ್ತಾ ಇಲ್ಲ. ಪುರಾತನ ಕಾಲದಲ್ಲಿ ನಾವೆಲ್ಲಾ ದಾನವರ ಮೇಲೆ ಧಾಳಿ ನಡೆಸಿದ್ದಾಗ ತ್ರಿಮೂರ್ತಿಗಳೆಲ್ಲಾ ನಮ್ಮ ಸಹಾಯಕ್ಕೆ ನಿಂತಿದ್ರು. ಈಗ ಅವರೆಲ್ಲ ಭೂಲೋಕದಲ್ಲಿ ಅಲ್ಲಿನ ಜನ ಸಲ್ಲಿಸ್ತಿರೋ ಪೂಜೆ, ತಿನ್ನಿಸ್ತಿರೋ ಪ್ರಸಾದ ಎಲ್ಲಾ ಸ್ವೀಕರಿಸ್ತಾ ದೇವಸ್ಥಾನಗಳಲ್ಲಿ ಆರಾಮವಾಗಿ ಇದ್ಬಿಟ್ಟಿದ್ದಾರೆ. ಅಲ್ಲೇನು ಇಲ್ಲಿಹಾಗೆ ಪ್ರಾರ್ಥನೆಗಳಿಗೆ ಉತ್ತರ ಕೊಡಲೇಬೇಕು ಅನ್ನೋ ಕಟ್ಟಳೆ ಏನೂ ಇಲ್ಲವಲ್ಲ. ಅಲ್ದೇ ಇಷ್ಟು ವರ್ಷ ಸುಖಜೀವನ ನಡೆಸಿ ನಮ್ಮ ದೇವತೆಗಳಿಗೆ ಕದನಾ ಅಂದ್ರೆ ಕಾಲು ನಡುಕ. ಆದ್ರೆ ಧನುಷ್ಕದನನ್ನ ಬಿಡಿಸಿಕೊಂಡು ಬರದೇ ಇದ್ರೆ ಖಂಡಿತಾ ನಮ್ಮಿಬ್ಬರಿಗೂ ಉಳಿಗಾಲವಿಲ್ಲ. ಅವನನ್ನ ರಾಕ್ಷಸರು ಎಲ್ಲಿ ಬಚ್ಚಿಟ್ಟಿದ್ದಾರೆ ಅನ್ನೋದೇ ತಿಳೀದು. ಅಂದಮೇಲೆ ಹುಡುಕೋದು ಹೇಗೆ? ರಾಕ್ಷಸರೊಡನೆ ಕಾದಿ ಜಯಿಸೋದು ಹೇಗೆ?''

ಮಂತ್ರಾಲೋಚನೆ ಹೀಗೆ ಸಾಗಿದ್ದಾಗ, ಪಶ್ಚಿಮ ದ್ವಾರದಿಂದ ಇಬ್ಬರು ಕಿನ್ನರ ಬೇಹುಗಾರರು ಇಂದ್ರನ ಆಸ್ಥಾನವನ್ನು ಪ್ರವೇಶಿಸಿದರು. ಅವರ ನಡುವೆ ಒಬ್ಬ

ಜೀನ್ಸ್‌ಧಾರಿ ತರುಣ. ''ದೇವೇಂದ್ರರಿಗೆ ಜಯಾಗಲಿ. ದೇವಗುರುಗಳಿಗೆ ಜಯವಾಗಲಿ. ''ಕಿನ್ನರ ಬೇಹುಗಾರರ ಜಯಕಾರದ ನಡುವೆ ಬೃಹಸ್ಪತಿ ಬಾಯಿಹಾಕಿ,

''ಯಾರು ಈತ? 'ಸ್ವರ್ಗಸ್ಥರಾಗದೇ ಸ್ವರ್ಗಕ್ಕೆ ಪ್ರವೇಶವಿಲ್ಲ' ಎಂದು ವಿಧಿಯ ನಿಯಮವೇ ಇರುವಾಗ ಅದನ್ನು ಉಲ್ಲಂಘಿಸಿ ಮಾನವರೂಪದಲ್ಲೇ ಜೀವ ಸಹಿತ ನಮ್ಮ ಲೋಕವನ್ನು ಪ್ರವೇಶಿಸಿರುವ ಈ ಅಧಿಕ ಪ್ರಸಂಗಿ ಯಾರು? ನೀವಾದರೂ ಅವನನ್ನು ನಮ್ಮ ಲೋಕದೊಳಕ್ಕೆ ಹೇಗೆ ಬಿಟ್ಟಿರಿ? ಈಗಳೀಗಲೇ ಉತ್ತರಿಸಿ'' ಎಂದು ಸಂಸರ ಭಾಷೆಯಲ್ಲಿ ಘರ್ಜಿಸಿದ.

''ಪ್ರಭೋ, ನಾವು ಎಂದಿನಂತೆ ನಮ್ಮ ಗಂಧರ್ವ ಲೋಕದ ಗಡಿಯನ್ನು ಕಾಯುತ್ತಿದ್ದಾಗ, ಒಮ್ಮೆಲೇ ಒಂದು ಸಿಡಿಲು ಅಪ್ಪಳಿಸಿದಂತಾಯಿತು. ಮರುಕ್ಷಣ ಈತ ಮತ್ತು ಇನ್ನೊಬ್ಬ ತರುಣಿ ತಮ್ಮ ಲೋಕವನ್ನು ಪ್ರವೇಶಿಸಿ ಬೆರಗು ಗಣ್ಣಿನಿಂದ ಸುತ್ತ ನೋಡುತ್ತಿದ್ದರು. ನಾವು ಓಡಿಹೋಗಿ ಅವರನ್ನು ಹಿಡಿಯುವುದರಲ್ಲಿದ್ದಾಗ ಆ ತರುಣಿ ಯಾವುದೋ ಮಾಯದಿಂದ ತಪ್ಪಿಸಿಕೊಂಡು ತನ್ನ ಲೋಕಕ್ಕೆ ಓಡಿಬಿಟ್ಟಳು. ಈತ ನಮಗೆ ಬಂಧಿಯಾದ. ನೇರವಾಗಿ ಇವನನ್ನು ಇಲ್ಲಿಗೆ ತಂದಿದ್ದೇವೆ'' ಎಂದು ಒಬ್ಬ ಬೇಹುಗಾರ ಹೇಳಿದ.

ಇಂದ್ರ, ಬೃಹಸ್ಪತಿಗೆ ಸುಮ್ಮನಿರಲು ಸೂಚಿಸಿ, ತಾನೇ ವಿಚಾರಣೆಯ ಸೂತ್ರ ಹಿಡಿದು ನೇರವಾಗಿ ವಿಷಯಕ್ಕೆ ಬಂದ.

''ಯಾರು ನೀನು?''

''ನಾನು ಬಾಲನ್ ಮೆನನ್. ನೀವು ನನ್ನ ಬಾಲ ಅಂತ ಕರೀಬಹುದು. ಆದರೆ ಈ ವಿಚಿತ್ರ ವೇಷ ಧರಿಸಿರೋ ನೀವೆಲ್ಲ ಯಾರು? ಈ ನಾಟಕದ ಸೆಟ್‌ಗೆ ನನ್ನನ್ನ ಕರೆದುಕೊಂಡು ಬಂದಿರೋ ಉದ್ದೇಶವಾದರೂ ಏನು ತಿಳಿಸ್ತೀರಾ?''

★★★

**ಒಂದು ವಿಚಾರಣೆ:**

ಮೆನನ್ಸ್ ವರ್ಚುಯಲ್ ಲ್ಯಾಬ್, ಸೈಬರ್ ಸಿಟಿಯಲ್ಲೇ ಅತ್ಯಂತ ಪ್ರಖ್ಯಾತವಾದ ರೀಸರ್ಚ್ ಇನ್ಸ್ಟಿಟ್ಯೂಟ್. ಸುಂದರ ಪರಿಸರವಿರಲೆಂದು ಬೆಳೆಸಿದ್ದ ಬರ್ಮುಡಾ ಹುಲ್ಲಿನ ವಿಶಾಲವಾದ ಹಾಸು, ಅದನ್ನು ದಾಟಿ ಮುಂದೆ ಹೋದರೆ ಒಂದು ಕಾರಂಜಿ. ಅದರ ಮುಂದೆಯೇ ನುಣುಪಾದ ಗ್ರಾನೈಟ್ ಹಾಸುಗಲ್ಲಿನ ವೆರಾಂಡಾ. ಅಲ್ಲಿ ಅನತಿ ದೂರದಲ್ಲಿ ಠೀವಿಯಿಂದ ಕುಳಿತಿದ್ದ ಕೆಂಪುಟುಟಿ,

ಹಾಲುಗಲ್ಲದ ಲಾವಣ್ಯದ ಖನಿ ಸ್ವಾಗತಕಾರಿಣಿಯನ್ನು (ಇಂದ್ರಿಯ ನಿಗ್ರಹದಿಂದ) ಪಕ್ಕದಿಂದ ಹಾದು ಮುಂದೆ ಹೋಗಿ ಬಲಕ್ಕೆ ತಿರುಗಿದರೆ, ಲ್ಯಾಬ್‌ನ ಮಾಲಿಕ, ಮುಖ್ಯ ವಿಜ್ಞಾನಿ, ಡಾ॥ ಬಾಲನ್ ಮೆನನ್ನರ ಆಫೀಸ್. ಆಫೀಸಿನ ಮೇಜಿನ ಮೇಲಿನ ಹೂವಿನ ಕುಂಡದಲ್ಲಿ ಕೆಂಪು ಗುಲಾಬಿ ಹೂವಿನ ಗೊಂಚಲೊಂದು ನೋಟಕರ ಕಣ್ಣುಗಳಿಗೆ ತಂಪೆರೆಯುತ್ತಿತ್ತು.

ಆದರೆ ಮೇಜಿನ ಪಕ್ಕದ ಕುರ್ಚಿಯೊಂದರಲ್ಲಿ ಕುಳಿತಿದ್ದ ಇನ್ಸ್ಪೆಕ್ಟರ್ ಶ್ಯಾಮ್‌ಗೆ ಗುಲಾಬಿ ನೋಡುವ ವ್ಯವಧಾನವಿರಲಿಲ್ಲ. ಗುಲಾಬಿ ಇರಲಿ, ಸೌಂದರ್ಯದಲ್ಲಿ ಅದನ್ನು ಮೀರಿಸುತ್ತಿದ್ದ ರೀಸರ್ಚ್ ಸಹಾಯಕಿ ಮೀರಾಳನ್ನು ತೀವ್ರವಾಗಿ ಪ್ರಶ್ನಿಸುವ ಜವಾಬ್ದಾರಿ ಅವನ ಪಾಲಿಗೆ ಬಂದಿತ್ತು.

''ನೋಡಿ, ಮಿಸ್ ಮೀರಾ, ನಿಧಾನವಾಗಿ ಯೋಚಿಸಿ ಉತ್ತರ ಕೊಡಿ. ಆ ಮೂಲೇಲಿರೋ ದೊಡ್ಡ ಹಳದೀ ಪೆಟ್ಟಿಗೆ....''

''ಪೆಟ್ಟಿಗೆ ಅಲ್ಲಾರೀ ಅದು. ಅದು ನಮ್ಮ ವರ್ಚುಯಲ್ ರಿಯಾಲಿಟಿ ಸಿಮ್ಯುಲೇಟರ್.''

''ಆಯ್ತು, ಆ ಸಿಮ್ಯುಲೇಟರಿನಲ್ಲಿ ನೀವು ನಿಮ್ಮ ಬಾಸ್ ಡಾ॥ ಮೆನನ್ ಕೂತು ಬಾಹ್ಯಾಕಾಶಾನ ಪರಿಶೀಲಿಸ್ತಾ ಇದ್ದಾಗ ಅಕಸ್ಮಾತ್ತಾಗಿ ಸಿಮ್ಯುಲೇಟರ್ ಯಾವುದೋ ಬೇರೆ ಲೋಕಕ್ಕೆ ಸಂಪರ್ಕ ಹೊಂದಿಬಿಡ್ತು. ಅಂತ ನಿಮ್ಮ ಲಿಖಿತ ಹೇಳಿಕೆ ನೀಡಿದ್ದೀರ. ಆಮೇಲೆ ಏನಾಯ್ತು ಅಂತ ಹೇಳ್ತೀರಾ?''

''ಖಂಡಿತವಾಗಿ ಹೇಳ್ತೀನಿ. ಸಿಮ್ಯುಲೇಟರಿನಲ್ಲಿ ಪರಿಶೀಲನೆ ನಡೆಸ್ತಾ ಇದ್ದಾಗ, ಒಮ್ಮೆಲೇ ಯಾವುದೋ ಹತ್ತೀ ತರಹ ಪದಾರ್ಥದ ಮೇಲೆ ನಡೀತಿದೀವೇನೋ ಅನ್ನಿಸ್ತು. ನನ್ನ ಬಾಸ್, ''ಮೀರಾ ಡಿಯರ್, (ಅವರು ನನ್ನನ್ನು ಯಾವಾಗಲೂ ಹಾಗೇ ಕರಿಯೋದು), ನಾವು ಯಾವುದೋ ಬೇರೆ ಲೋಕಕ್ಕೆ ಬಂದಿರೋ ಪಾಸಿಬಿಲಿಟಿ ಇದೆ. ನೀನೇನೂ ಹೆದರ್ಬೇಡ ಅಂತ ಹೇಳ್ತಿರೋವಾಗಲೇ ಯಾರೋ ಇಬ್ರು ಎಥ್ನಿಕ್ ಡ್ರೆಸ್ ಹಾಕ್ಕೊಂಡು ನಮ್ಮನ್ನ ಹಿಡಿಯುಕ್ಕೆ ಬಂದ್ರು. ಮರುಕ್ಷಣ ನಾನು ಇಲ್ಲಿ ನಮ್ಮ ಆಫೀಸಿನಲ್ಲಿ ಈ ಪಂಚಿಂಗ್ ಕ್ಲಾಕ್ ಬಳಿ ನಿಂತಿದ್ದೆ. ನಮ್ಮ ಬಾಸ್ ಇಲ್ಲಿರಲಿಲ್ಲ. ಆ ಎಥ್ನಿಕ್ ಡ್ರೆಸ್‌ನೋರು ಅವರ್ನ ಹಿಡಿದುಕೊಂಡು ಹೋಗಿದಾರೆ ಅಂತ ನನ್ನ ಸಸ್ಪಿಷನ್.''

''ಮೀರಾ ಅವರೇ, ನೀವು ಅಷ್ಟು ಬೇಗ ತಪ್ಪಿಸಿಕೊಂಡು ಬಂದದ್ದೇ ಆಶ್ಚರ್ಯ. ಅದು ಹೇಗೆ ನಿಮಗೆ ಸಾಧ್ಯಾ ಆಯ್ತು?''

''ವರ್ಚುಯಲ್ ಪ್ರಯಾಣ ಮಾಡೋವಾಗ ನಾವು ಹೋಗಬೇಕಾದ ಜಾಗ ಕುರಿತು ಏಕಾಗ್ರತೆಯಿಂದ ಚಿಂತಿಸಿದರೆ ಆ ಕ್ಷಣದಲ್ಲೇ ನಾವು ಅಲ್ಲಿರಬಹುದು....''

''ಅದ್ಸರಿ, ಆದ್ರೆ ನಿಮ್ಮನ್ನ ಯಾರೋ ಹಿಡಿಯೋಕ್ಕೆ ಬಂದಾಗ, ಅಲ್ದೇ ನಿಮ್ಮ ಬಾಸ್‌ನ ಅವರು ಹಿಡಿದುಕೊಂಡು ಹೊರಟಿದ್ದಂತಹ ಭಯಾನಕ ಪರಿಸ್ಥಿತಿಯಲ್ಲೂ ನಿಮಗೆ ಟೆನ್ಷನ್ ಆಗದೇ, ಏಕಾಗ್ರ ಚಿತ್ತ ಹೇಗೆ ಬಂತು ಅನ್ನೋದು ನನ್ನ ಪ್ರಶ್ನೆ.''

''ಅದಕ್ಕೆ ನಾನೇನೂ ಕಷ್ಟ ಪಡಬೇಕಾಗಲಿಲ್ಲ ಇನ್ಸ್ಪೆಕ್ಟರ್. ಆಗ ಸರಿಯಾಗಿ ಐದು ಗಂಟೆ ಆಗಿತ್ತು. ಆ ಟೈಮಿಗೆ ಸರಿಯಾಗಿ ನಾನು ಗಡಿಯಾರ ಪಂಚ್ ಮಾಡಿ ಮನೆಗೆ ಹೋಗೋದು ನನ್ನ ದಿನನಿತ್ಯ ಪರಿಪಾಠ. ಒಂದು ಸಲ ನನಗೆ ಮನೆ ಯೋಚನೆ ಬಂದುಬಿಟ್ರೆ ಮಿಕ್ಕದ್ದೆಲ್ಲಾ ಸಂಪೂರ್ಣವಾಗಿ ಮರ್ತೇ ಹೋಗುತ್ತೆ.

ನಿಮ್ಮ ಬಾಸೇ ಧನ್ಯ ಅಂದುಕೊಳ್ಳುತ್ತಾ ಶ್ಯಾಮ್ ನನ್ನ F.I.R. ಮುಗಿಸಿದ.



**ಒಂದು ಒಡಂಬಡಿಕೆ**

''ಹಾಗಾದರೆ ಧನುಷ್ಕದನನ್ನು ಹುಡುಕುವುದರಲ್ಲಿ ನಮಗೆ ನಿಮ್ಮ ಪೂರ್ಣ ಸಹಕಾರ ಸಿಗುತ್ತೆ ಅಲ್ಲವೇ ಬಾಲ ಅವರೇ'' ಇಂದ್ರ ಕೇಳಿದ. ಕಳೆದ ಒಂದೆರಡು ಗಳಿಗೆಗಳಲ್ಲಿ ಇಂದ್ರ ಮತ್ತು ಬೃಹಸ್ಪತಿ ಇವರಿಬ್ಬರ ಜ್ಞಾನ ದಿಗಂತ ಅನೇಕ ಪಟ್ಟು ವಿಸ್ತರಿಸಿತ್ತು. ಭೂಲೋಕದಲ್ಲಿ ನಡೆದಿದ್ದ, ನಡೆಯುತ್ತಿರುವ, ನಡೆಯುವ ಐಟಿ ಪ್ರಗತಿ, ಅದರ ಒಂದು ಅಂಶವಾದ ವಿ.ಆರ್. ಕ್ಷೇತ್ರದಲ್ಲಿನ ಬೃಹತ್ ಬೆಳವಣಿಗೆ, ಮೆನನ್ನನ ವರ್ಚುಯಲ್ ಲ್ಯಾಬ್ ತನ್ನ ಅಸಾಧಾರಣ ಕೌಶಲ್ಯದಿಂದ ಗಂಧರ್ವ ಲೋಕಕ್ಕೇ ಏಣಿ ಹಾಕಿದ್ದು ಇವೆಲ್ಲವನ್ನೂ ಬಾಲ ಉಪ್ಪು ಖಾರ ಬೆರಸಿ ವಿವರಿಸಿ, ತನ್ನ ಇಬ್ಬರು ಕೇಳುಗರನ್ನು ಮೂಕವಿಸ್ಮಿತರನ್ನಾಗಿ ಮಾಡಿದ್ದ.

''ಖಂಡಿತ. ಅದರಲ್ಲಿ ಅನುಮಾನವೇ ಇಲ್ಲ. ರಾಕ್ಷಸರು ನಿಮ್ಮ ಧನುಷ್ಕಾಮನನನ್ನ....''

''ಧನುಷ್ಕದ'' ಬೃಹಸ್ಪತಿ ಕರೆಕ್ಟ್ ಮಾಡಿದ.

''ಆಯ್ತು, ಧನುಷ್ಕದನನ್ನು ಎಲ್ಲೇ ಬಚ್ಚಿಟ್ಟಿರಲಿ ನಮ್ಮ ಲ್ಯಾಬ್‌ನಲ್ಲಿರುವ ಅತ್ಯಂತ ಶಕ್ತಿಶಾಲಿ ಸರ್ಚ್ ಇಂಜಿನ್‌ಗಳು ಅವನ ವಿಳಾಸವನ್ನು ಪತ್ತೆಮಾಡಿ ನಮಗೆ ತಿಳಿಸಿಬಿಡುತ್ತವೆ. ಒಂದು ಪಕ್ಷ ಬೇರೇ ಯಾವುದೋ ಲೋಕದಲ್ಲಿದ್ದರೂ ಸಹಾ

ನಮ್ಮ ಸಿಮ್ಯುಲೇಟರ್ ಮೂಲಕ ಅವನನ್ನು ಹಿಡಿದು ತರುವುದು ಮಕ್ಕಳಾಟ. ಇನ್ನು ನಾನು ಬರಲೇ'' ಬಾಲನಿಗೆ ಈ ಜೋಕರ್‌ಗಳಿಂದ ಎಂದಿಗೆ ತಪ್ಪಿಸಿಕೊಂಡು ಯೋದೇನೋ ಅನ್ನಿಸಿತ್ತು. ತನ್ನ ಲ್ಯಾಬ್‌ಗೆ ಅವನು ಹಿಂದಿರುಗಿ ಮಾಡಲೇಬೇಕಾದ ಕೆಲಸಗಳು ನೂರಾರಿದ್ದವು.

''ಸ್ವಲ್ಪ ತಾಳಿ, ಅಷ್ಟು ಅವಸರ ಬೇಡ. ಕೆಲಸ ನೀವು ತಿಳಿದಿರೋ ಅಷ್ಟು ಸುಲಭ ಅಲ್ಲ ಬಾಲ ಅವರೇ. ದಾನವರು ಅಂದ್ರೆ ಏನು ಅಂತ ತಿಳ್ಕೊಂಡಿದೀರಿ. ಅಲ್ದೇ ನಿಮಗೆ ಧನುಷ್ಕದನ ಮುಖ ಪರಿಚಯಾನೇ ಇಲ್ಲದೇ ಇರೋವಾಗ ಯಾರನ್ನಾ ಅಂತ ಹಿಡೀತೀರ. ಒಂದು ಕೆಲಸ ಮಾಡೋಣ. ನಿಮ್ಮ ಜೊತೆಗೆ ನಿಮ್ಮ ಸಹಾಯಕ್ಕೇ ಅಂತ ನಮ್ಮ ಗಂಧರ್ವ ಲೋಕದ ಚೀಫ್ ಇವೆಸ್ಟಿಗೇಟರ್‌ನ ಕಳಿಸ್ತೀವಿ. ಆಗ ನಿಮ್ಮ ಕಾರ್ಯ ಸುಗಮವಾಗಬಹುದು. ಬೃಹಸ್ಪತಿ, ಅವರನ್ನ ಸ್ವಲ್ಪ ಇಲ್ಲಿಗೆ ಬರಹೇಳ್ತೀಯಾ?''

ಇಂದ್ರನ ಈ ಸಲಹೆ ಬಾಲನಿಗೆ ಸುತರಾಮ್ ರುಚಿಸಲಿಲ್ಲ. ಆದರೆ ವಿಧಿಯಿಲ್ಲ.... ಇಲ್ಲಿಂದ ಬೇಗ ತಪ್ಪಿಸಿಕೊಂಡು ಲ್ಯಾಬ್ ಸೇರಬೇಕಾದರೆ ಇವರು ಹೇಳುದ್ದಕ್ಕೆಲ್ಲಾ ತಲೆಯಾಡಿಸುವುದೇ ಉತ್ತಮ ಎಂದುಕೊಂಡ ಬಾಲ.

ಇಂದ್ರನ ಆಸ್ಥಾನದಲ್ಲಿ ಒಮ್ಮೆಲೇ ಮಿಂಚು ಹೊಳೆದಂತಾಯಿತು. ಬಾಲ ಕಣ್ಣೆತ್ತಿ ನೋಡಿದ. ಅಪ್ಸರೆಯೊಬ್ಬಳು ಇವರತ್ತ ನಡೆದು ಬರುತ್ತಿದ್ದಳು. ಬಾಲ ತನ್ನ ಇಡೀ ಜೀವಿತದಲ್ಲಿ ಕಂಡರಿಯದ ರೂಪರಾಶಿ ಅವಳದ್ದಾಗಿತ್ತು. ಸಾಫ್ಟ್‌ವೇರ್ ಪರಿಸರದ ಎಳೆಯ ಹೆಂಗಳೆಯರೊಡನೆ ದಿನನಿತ್ಯ ವ್ಯವಹರಿಸುತ್ತಿದ್ದ ಬಾಲನಿಗೆ, ಸ್ತ್ರೀ ಸೌಂದರ್ಯ ಹೊಸದೇನಾಗಿರಲಿಲ್ಲ. ಆದರೂ ಈಗ ತನ್ನ ಮುಂದೆ ಪ್ರತ್ಯಕ್ಷವಾದ ವಿಷನ್ ನಿಜಕ್ಕೂ out of the world ಅಂದುಕೊಳ್ಳುತ್ತಿದ್ದಂತೆ, 'ಬಾಲ ಅವರೇ, ಇವರು ನಮ್ಮ ಚೀಫ್ ಇನ್ವೆಸ್ಟಿಗೇಟರ್ ಚಿತ್ರಾಂಗಿ. ಧನುಷ್ಕದನ ಪತ್ತೆ ಆಗುವವರೆಗೂ ಇವರು ನಿಮ್ಮೊಡನಿದ್ದು ನಿಮಗೆ ಸಹಕಾರ ನೀಡುತ್ತಾರೆ. ಒಂದು ವೇಳೆ ನೀವು ನಿಮ್ಮ ಯತ್ನದಲ್ಲಿ ವಿಫಲರಾದಿರೋ, ಈ ಲೋಕಕ್ಕೆ ನೀವು ಅತಿಕ್ರಮ ಪ್ರವೇಶ ಮಾಡಿದ ತಪ್ಪಿಗಾಗಿ ಇವರು ನಿಮ್ಮನ್ನು ಬಂಧಿಸಿ ಪುನಃ ಇಲ್ಲಿಗೆ ಕರೆತರುವಂತೆ ಆದೇಶಿಸಿದೆ. ಹೋಗಿ ಬನ್ನಿ ಅದೃಷ್ಟ ನಿಮ್ಮೊಂದಿಗಿರಲಿ. ಅದು ನಿಮಗೀಗ ಅಗತ್ಯ'' ಅನ್ನುತ್ತಾ ಇಂದ್ರ ಅವರನ್ನು ಬೀಳ್ಕೊಟ್ಟ.

★★★

**ಒಂದು ಹುಡುಕಾಟ:**

"ರಾಕ್ಷಸರು ಸಾಮಾನ್ಯವಾಗಿ ಪಾತಾಳದಲ್ಲಿ ಇರ್‍ತಾರೆ ಅಂತ ನಮ್ಮ ನಂಬಿಕೆ. ನಿಮ್ಮ ಸಿಮ್ಯುಲೇಟರಿನಿಂದ ಅಲ್ಲಿಗೆ ಸಂಪರ್ಕ ಪಡೆಯುಕ್ಕಾದರೆ ನಾವು ಅಲ್ಲಿಗೆ ಹೋಗಿ ಧನುಷ್ಕದನ ಅನ್ವೇಷಣೆ ನಡೆಸಬಹುದು. ಏನಂತೀರಾ?" ಚಿತ್ರಾಂಗಿ ತನ್ನ ಅಭಿಪ್ರಾಯವನ್ನು ಮಂಡಿಸಿದಳು. ವಿಶಾಲವಾದ ಮೇಜಿನ ಆಚೆ ಬದಿಯಲ್ಲಿ ಬಾಲ ಮೆಲುನಗೆ ಬೀರುತ್ತಾ ಕುಳಿತಿದ್ದ. ಇಂದ್ರ ದೇವನ ಆಸ್ಥಾನದಲ್ಲಿ ಚಿತ್ರಳ ಭೇಟಿಯಾದಂದಿನಿಂದ ಈ ಮೆಲು ನಗೆ ಅವನ ಮುಖದ ಪರ್ಮನೆಂಟ್ ಫೀಚರ್ ಆಗಿತ್ತು.

"ಏನಂತೀಯಾ ಅನ್ನಿ. ಅದೆಲ್ಲಾ ಆಗತ್ಯ ಇಲ್ಲಾ ಚಿತ್ರಾ. ನಾವು ಸಾಫ್ಟ್‌ವೇರ್ ಜನ. ಕೆ.ಬಿ.ಕೆ. ಗಳು. ಕುರ್ಚಿ ಬಿಟ್ಟು ಕದಲಬಾರದು ಅನ್ನೋದೇ ನಮ್ಮ ತಾರಕ ಮಂತ್ರ. ಈಗ ನೋಡಿ, ಈ ಸರ್ಚ್ ಇಂಜಿನ್‌ನಲ್ಲಿ "ರಾಕ್ಷಸ" ಅಂತ ಟೈಪ್ ಮಾಡಿ ಸರ್ಚ್ ಬಟನ್ ಒತ್ತಿದೆ, .... ಅಗೊ ನೋಡಿ ಹದಿನೇಳು ವೆಬ್‌ಸೈಟ್‌ಗಳಲ್ಲಿ ಈ ಪದ ಪ್ರಯೋಗ ಆಗಿದೆ ಅಂತ ಬಂದಿದೆ. ಮೊದಲ್ನೇದು ಸ್ಲೋವಾಕಿಯಾದ ನೈಟ್ ಕ್ಲಬ್ಬೊಂದರ ವಿಷಯ. ಅದರಿಂದ ನಮಗೆ ಪ್ರಯೋಜನ ಇಲ್ಲ. ಇನ್ನೊಂದು ಜಿಯಾಲಜಿ ವೆಬ್‌ಸೈಟ್. ರಾಕ್ ಫಾರ್ಮೇಷನ್ ಮೇಲೆ ಏನೋ ಬರ್‍ಕೊಂಡಿದ್ದಾನೆ. ಇರಲಿ. ಹೀಗೇ ಸ್ಕ್ರಾಲ್ ಮಾಡಿಕೊಂಡು ಮುಂದೆ ಹೋದ್ರೆ.... ಹ್ಞಾ ಇಲ್ಲೇನೋ ಇಂಟರೆಸ್ಟಿಂಗ್ ಆಗಿ ಕಾಣ್ತಾ ಇದೆ. ಇಲ್ನೋಡಿ, ರಾಕ್ಷಸ - ಒಂದು ಪ್ರಾಚೀನ ಕಾಲದ ಜನಾಂಗ. ಒಂದು ಕುಡಿಕೆ ಹಾಲಿಗಾಗಿ ಬೆಟ್ಟ, ಹಾವು ಇವುಗಳನ್ನೆಲ್ಲಾ ಬಳಸಿ ಕೊನೆಗೆ ದೇವತೆಗಳು ಎಂಬ ಒಂದು ತೀರ ಕೃತ್ರಿಮ ಪಂಗಡದ ಮೋಸಕ್ಕೆ ಬಲಿಯಾಗಿ ಪಾತಾಳ ಸೇರಿದರು. ಇತ್ತೀಚೆಗೆ, ಭೂಗತ ಅಣುಸ್ಫೋಟದ ಬಾಧೆ ತಡೆಯಲಾರದೇ ಭೂಲೋಕಕ್ಕೆ ಬಂದು ಇಲ್ಲಿನ ವಾಸಿಗಳೊಡನೆ ಬೆರೆತು ಸುಖವಾಗಿದ್ದಾರೆ.

ನೋಡಿದ್ರಾ ಚಿತ್ರಾ, ರಾಕ್ಷಸರೆಲ್ಲಾ ಈಗ ತಲೆಮರೆಸಿಕೊಂಡು ಭೂಲೋಕದಲ್ಲೇ ಇದ್ದಾರಂತೆ."

"ಹಾಗಾದ್ರೆ, ಧನುಷ್ಕದನೂ ಸಹಾ ಇಲ್ಲೇ ಇದ್ದಾನೆ ಅಂತಾಯಿತು. ನಿಮ್ಮ ಸರ್ಚ್ ಇಂಜಿನ್‌ನಿಂದ ಅವನು ಎಲ್ಲಿದಾನೆ ಅಂತ ತಿಳಿಯುಕ್ಕೆ ಆಗುತ್ತದೆಯೇ?"

"ಟ್ರೈ ಮಾಡೋಣ, ಧ-ನು-ಷ್ಕ-ದ.... ಅರೆ, Zero documents found ಅಂತ ಬಂದಿದೆಯಲ್ಲಾ. ಬಹುಶಃ ಅವನು ತನ್ನ ಹೆಸರನ್ನು ಬದಲಾಯಿಸಿಕೊಂಡಿರಬಹುದು. ಅವನಿಗೆ ಬೇರೆ ಯಾವುದಾದರೂ ಹೆಸರು?"

''ನನಗೆ ತಿಳಿದ ಮಟ್ಟಿಗೆ ಅವನಿಗೆ ಇನ್ನಾವ ಹೆಸರೂ ಇರಲಿಲ್ಲ. ಈಗೇನು ಮಾಡೋಣ. ಡೆಡ್ ಎಂಡ್ ಆಯ್ತಲ್ಲಾ.''

''ಕಳವಳ ಬೇಡ ಚಿತ್ರಾ. ಹೇಗಾದರೂ ಮಾಡಿ ನಿನ್ನ ಆಸಾಮೀನ ಕಂಡು ಹಿಡಿದೇ ಹಿಡೀತೀನಿ. ಭೂಲೋಕದಲ್ಲಿ ವಾಸಮಾಡಿದಾನೆ ಅಂದಮೇಲೆ ಅವನು ಇಲ್ಲೀ ಭಾಷೆನೇ ಬಳಸ್ತಿರಬಹುದು. ಹಾಗಾದ್ರೆ... ಧನುಷ್ಕದ... ಧನುಷ್ಕದ... ಧನುಷ್....ಕದ....ಚಿತ್ರಾ.... ಹೊಳೀತು. ಧನುಷ್ ಅಂದ್ರೇನು ಹೇಳಿ''

''ನಿಮ್ಮ ಭಾಷೇಲಿ ಬಿಲ್ಲು''

''ಕದ ಅಂದ್ರೆ?''

''ಬಾಗಿಲು, ದ್ವಾರ, ಗೇಟ್''

''ಈಗ ಒಂದು ವೆಬ್‌ಸೈಟ್ ತೆಗೆದು ಒಂದು ಚಿತ್ರ ತೋರಿಸ್ತೀನಿ. ಅವನನ್ನ ಗುರುತಿಸುಕ್ಕಾಗಿತ್ತಾ ಹೇಳಿ'' ಎನ್ನುತ್ತಾ ಬಾಲ ಕೆಲವು ಗುಂಡಿಗಳನ್ನು ಒತ್ತಿ ಕಂಪ್ಯೂಟರ್ ತೆರೆಯ ಮೇಲೆ ಒಂದು ಚಿತ್ರ ಮೂಡಿಸಿದ.

''ಹ್ಞಾ, ಅವನೇ.... ಅವನೇ ಧನುಷ್ಕದ. ನಿಜಕ್ಕೂ ನೀನು ಜೀನಿಯಸ್ ಬಾಲ. ಅವನ ವಿಳಾಸ ಬೇರೆ ಇದೆ ಇಲ್ಲಿ... ಬಾ, ಈಗಲೇ ಅವನಲ್ಲಿಗೆ ಹೋಗಿ ಮಾತನಾಡಿ ಅವನನ್ನು ಗಂಧರ್ವ ಲೋಕಕ್ಕೆ ಕರೆದೊಯ್ಯೋಣ. ಇಂದ್ರನಿಗೆ ನೀನು ಕೊಟ್ಟ ಭಾಷೆ ಉಳಿಸಿಕೊಂಡ, ಭಲೆ!''



**ಒಂದು ಮಹತ್ವದ ಭೇಟಿ**

ವಿಶ್ವವಿಖ್ಯಾತ ಮೈಕ್ರೋಸಾಫ್ಟ್ ಕಾರ್ಪೊರೇಷನ್ನಿನ ಎಂಭತ್ತನೇ ಮಹಡಿ. ಸುಸಜ್ಜಿತವಾದ ಆಫೀಸ್ ಒಂದರಲ್ಲಿ ಚಿತ್ರಾಂಗಿ ಮತ್ತು ಬಾಲ, ತಮ್ಮ ಅತಿಥೇಯನ ಬರುವಿಕೆಯನ್ನು ಇದಿರು ನೋಡುತ್ತಾ ಕುಳಿತಿದ್ದರು. ಒಮ್ಮೆಲೇ ಬಾಗಿಲು ತೆರೆಯಿತು. ''ಮಾರ್ವಲೆಸ್ ಚಿತ್ರಾ, ನನ್ನನ್ನ ಇಲ್ಲೀಗೆ ನೀನು ಟ್ರೇಸ್ ಮಾಡಿದ್ದೇ ಒಂದು ಮಿರಕಲ್. ನೀವು ವರ್ಚುಯಲ್ ರಿಯಾಲಿಟಿ ಖ್ಯಾತಿಯ ಡಾ॥ ಮೆನನ್ ಅಂತ ತಿಳೀತು. ವಂಡರ್‌ಫುಲ್ ಕೆಲಸ ಮಾಡ್ತಾ ಇದೀರ ನೀವು. ಸೆಖೆ ಅನ್ನಿಸುತ್ತೆ ಅಲ್ಲ, ಸ್ವಲ್ಪ ತಾಳಿ ಕಿಟಕಿ ತೆಗೀತೀನಿ. ಹ್ಹ, ಹ್ಹ, ಹ್ಹ ನಮ್ಮ ಆಫೀಸಿನಲ್ಲಿ ಕಿಟಕಿ ತೆಗೆಯೋದು ಸಹಜವೇ ಅಂತೀರಾ, ಅದೆಲ್ಲಾ ಹಳೆಯ ಕಥೆ, ಈಗ ನಾವು ಒಂದು ಅತ್ಯಂತ ಗೋಪ್ಯವಾದ ಪ್ರಾಜೆಕ್ಟ್ ಒಂದನ್ನು ಮುಗಿಸುವ ಹಂತದಲ್ಲಿದ್ದೇವೆ.

ಅಣಬೆಗಳಂತೆ dot com ಕಂಪನಿಗಳು ಬೆಳೆಯುತ್ತಿರುವುದು ನಿಮಗೆ ತಿಳಿದಿರಬಹುದು. ಅವುಗಳಲ್ಲಿ ಕೆಲಸ ಮಾಡುವ ಲಕ್ಷಾಂತರ ಸೈಬರ್ ಕೆಲಸಗಾರರು, work stress ನಿಂದ ಬಳಲಿ, ಆರೋಗ್ಯ ಕೆಡಿಸಿಕೊಳ್ಳುತ್ತಿದ್ದಾರೆ. ಅವರನ್ನು ಗಮನದಲ್ಲಿಟ್ಟು ನಮ್ಮ ಹೊಸ ಸಾಫ್ಟ್‌ವೇರ್ dot calm ಮುಗಿಯುವ ಹಂತದಲ್ಲಿ...."

"ಧನುಷ್ಕದ" ಚಿತ್ರಾಂಗಿಯ ಚಾಟಿಯೇಟಿನಂತಹ ಕೂಗು ಬಿಲ್ ಗೇಟ್ಸ್‌ನ ಮಾತನ್ನು ಅರ್ಧದಲ್ಲಿಯೇ ತುಂಡರಿಸಿತು. "ಧನುಷ್ಕದ, ಏನು ಈ ಎಲ್ಲಾ ಆಟ? ಅಲ್ಲಿ ಗಂಧರ್ವರೆಲ್ಲಾ ನಿನ್ನ ಅಪಹರಣವಾಗಿದೆಯೆಂದು ಭಾವಿಸಿ ಅನ್ನ ನೀರು ಬಿಟ್ಟು ಕಾಯುತ್ತಿದ್ದಾರೆ. ನೀನು ಇಲ್ಲಿ ಸಕಲೈಶ್ವರ್ಯ ಸಂಪನ್ನನಾಗಿ ಮೆರೆಯುತ್ತಿದ್ದೀಯೆ. ಇಂದ್ರದೇವ, ಗುರು ಬೃಹಸ್ಪತಿ, ನಿಮ್ಮನ್ನು ಹಿಂದಕ್ಕೆ ಕರೆದು ತರಲು ನನ್ನನ್ನು ಇಲ್ಲಿಗೆ ಕಳುಹಿಸಿದ್ದಾರೆ. ಸ್ವರ್ಗಲೋಕದ ಸುಖ, ಸಮೃದ್ಧಿಗಳನ್ನು ತ್ಯಜಿಸಿ ಈ ಅನಿಶ್ಚಯದ ಮರ್ತ್ಯರ ಪ್ರಪಂಚವನ್ನು ನೀನು ಆರಿಸಿದುದಾದರೂ ಹೇಗೆ?....."

"ಸ್ವಲ್ಪ, ಸ್ವಲ್ಪ ತಡೆ ಚಿತ್ರಾ, ಅನಿಶ್ಚಯದ ಮರ್ತ್ಯರ ಜಗತ್ತು ಅಂದೆಯಲ್ಲಾ, ಅದೇ ನಿನ್ನ ಉತ್ತರ. ಗಂಧರ್ವ ಲೋಕದ ಅಮರತ್ವ, ಸವಾಲಿಲಲ್ಲದ ಬರಡು ಜೀವನದಲ್ಲಿ ಮುಳುಗಿ ನನಗೆ ಉಸಿರೇ ಕಟ್ಟಿದಂತಾಗಿತ್ತು. ಹೀಗೆಯೇ ಮುಂದುವರಿದರೆ ಮುಂದೊಮ್ಮೆ ನಾನೂ ಸಹಾ ಇಂದ್ರ, ಬೃಹಸ್ಪತಿಗಳಂತೆ ಬಾಲಿಶ ಲೈಂಗಿಕತೆಯಲ್ಲೇ ತೃಪ್ತಿಕಾಣುವಂತೆ ಆಗಿಬಿಡಬಹುದೆಂಬ ತೀವ್ರ ಹೆದರಿಕೆಯಿಂದ, ಅಪಹರಣದ ನಾಟಕ ಹೂಡಿ ಇಲ್ಲಿಗೆ ಬಂದುಬಿಟ್ಟೆ. ಈ ಭೂಲೋಕದಲ್ಲಿನ ಅನಿಶ್ಚಿತತೆಯೇ ಇಲ್ಲಿನ ಸವಾಲು. ಪ್ರತಿಕ್ಷಣವೂ ಮೃತ್ಯುವನ್ನು ಇದಿರಿಸುತ್ತಲೇ ನನ್ನ ಗುರಿಗಳನ್ನು ನಿರ್ಧರಿಸುವ, ನಿರ್ಧರಿಸುತ್ತಿದ್ದಂತೆಯೇ ಅದನ್ನು ಸಾಧಿಸುವ ಎದೆಗಾರಿಕೆ ಈ ಲೋಕದ ನಿಜವಾದ ಆಕರ್ಷಣೆ. ಈ ಹೋರಾಟದಲ್ಲಿ ದೊರಕುವ ಆತ್ಮ ಸಂತೃಪ್ತಿಯ ಮುಂದೆ ಎಂದಿಗೂ ಬದಲಾಗದ ಅಮರತ್ವ ಯಾವ ಸಾಟಿ! ಚಿತ್ರಾ, ನೀನು ಜಾಣೆ, ಪರಿಸ್ಥಿತಿಯನ್ನು ಬಹುಬೇಗ ತಿಳಿಯಬಲ್ಲೆ. ಬಾ, ನನ್ನೊಂದಿಗೋ ಇಲ್ಲ ಮೆನಸ್ನರಂದಿಗೋ ಸವಾಲುಗಳನ್ನೆದುರಿಸುತ್ತಾ ಇಲ್ಲೇ ಇದ್ದುಬಿಡು. ಈಗಲೇ ನಿಂತ ನಿಲುವಿನಲ್ಲೇ ನೀನೇನು ನಿರ್ಧರಿಸಬೇಕಾಗಿಲ್ಲ, ನಮ್ಮ ಅತಿಥಿ ಗೃಹದಲ್ಲಿ ಒಂದು ವಾರ ಇದ್ದು ಸ್ವತಂತ್ರ ಮನಸ್ಸಿನಿಂದ ನಿನ್ನ ಭವಿಷ್ಯವನ್ನು ನಿರ್ಧರಿಸು. ಈಗ ನನಗೆ ವೇಳೆಯಾಯಿತು. ಸಂಜೆಗೆ ಭೇಟಿಯಾಗುತ್ತೇನೆ. ಅಪೆರಾಗೆ ಹೋಗುವ. ನೀವೀಗ ಹೋಗಿಬನ್ನಿ."

★★★

ಬೃಹಸ್ಪತಿ ಏದುಸಿರು ಬಿಡುತ್ತಾ ಇಂದ್ರದೇವನ ಸನ್ನಿಧಿಗೆ ಬಂದ.

''ಇಂದ್ರದೇವ, ಸರ್ವನಾಶ, ಸರ್ವನಾಶ....''

''ಏನಾಯ್ತು, ಗುರುದೇವ?''

''ಗಂಧರ್ವ ಲೋಕದಲ್ಲಿ ಒಂದು ಇಂಟರ್ನೆಟ್ ಕಿಯಾಸ್ಕ್ ಹಾಕಿದಾರಂತೆ. ಭೂಲೋಕದಿಂದ ಧನುಷ್ಕದ ಅದನ್ನ ದಾನವಾಗಿ ಕಳಿಸಿದ್ದಾನಂತೆ. ಚಿತ್ರಾಂಗಿ ಧನಮುಷ್ಕನೊಂದಿಗೆ ಭೂಲೋಕದಲ್ಲೇ ನಿಂತುಬಿಟ್ಟಿದ್ದಾಳಂತೆ. ಗಂಧರ್ವರೆಲ್ಲಾ ಧನುಷ್ಕದನೊಂದಿಗೆ ಈಮೇಯ್ಲ್ ವ್ಯವಹಾರ ಶುರುಹಚ್ಚಿದ್ದಾರಂತೆ. ನಮ್ಮ ಅಧಿಕಾರಕ್ಕೆ ಕುರುಡು ಕಾಸಿನ ಬೆಲೆಯೂ ಇಲ್ಲದಂತಾಗಿದೆ. ಈಗೇನು ಮಾಡೋಣ?''

''ಕಳವಳ ಬೇಡ ಗುರುವರ್ಯ, ಇಂದು ಸಂಜೆ ಪಾನಗೃಹದಲ್ಲಿ ಊರ್ವಶಿಯ ನರ್ತನವಿದೆ. ಬಾ ಅಲ್ಲಿಗೆ ಹೋಗೋಣ. ಕೈಲಾಸಂ ಹೇಳಿದ ಹಾಗೆ, ನಮ್ಮೂರೇ ವಾಶಿ'' ಅಂದ ಇಂದ್ರದೇವ.

## ಸಾವಿರದ ಮಾತು

ಸಾವಿರದ<br>
ಮನೆಯ ಸಾಸಿವೆಯ<br>
ಮಾತೇಕೆ?

ಆಡಿ<br>
ಸಾವಿರದ<br>
ಸಾವಿರದ<br>
ಮಾತು

ಅದು<br>
ಬೆಲೆಯುಳ್ಳ ಮಾತು<br>
ಅದು<br>
ಹತ್ತು ಲಕ್ಷದ ಮಾತು

ಎನ್. ಪ್ರಕಾಶ್

# ಸತ್ಸಂಗದ ಮಹಿಮೆ

– ಅ.ರಾ.ಸೇ.

(ಒಂದು ಹಳೆಯ ಕತೆ; ಹೊಸದಾಗಿ ಇದ್ದಕ್ಕಿದ್ದ ಹಾಗೇ ಹೇಳಿದ್ದು)

ಎರಡು ವರ್ಷಗಳ ಕೆಳಗೆ ನಾರದರು ವೈಕುಂಠಕ್ಕೆ ಹೋದರು. ಶ್ರೀಮನ್ಮಹಾವಿಷ್ಣುವು, ಅವರ ವಂದನೆಯನ್ನು ಸ್ವೀಕರಿಸಿ ''ನಾರದ, ಏನು ಸುದ್ದಿ? ಎಲ್ಲಿಂದ ಬಂದೆ? ಅಲ್ಲೇನು ವಿಶೇಷ?'' ಎಂದು ಕೇಳಿದರು. ನಾರದರು ''ನಾರಾಯಣ, ಭೂಲೋಕದಿಂದ ಬರುತ್ತಿದ್ದೇನೆ. ಅಲ್ಲಿ ಏನು ವಿಶೇಷ ಬರಬೇಕು? ಎಂದಿನಂತೆ ಕೊಲೆ, ದರೋಡೆ, ಜಗಳ, ಯುದ್ಧ, ದುರಾಗ್ರಹಗಳೇ ಮುಂದುವರಿದಿವೆ. ಅದನ್ನೇ ಜನರು ನಾಗರಿಕತೆ, ಸಂಸ್ಕೃತಿ ಎಂದು ಹೇಳುತ್ತಾರೆ. ಆದರೂ ಅಲ್ಲಿ ಮೊದಲಿನಂತೆ ಕೆಲವರು ಮಾತ್ರ ಹುಟ್ಟು ಸಾವುಗಳ ಚಕ್ರದಿಂದ ಬಿಡುಗಡೆ ಹೇಗೆ ಎಂದು ಭಾವಿಸಿದ್ದಾರೆ. ಈ ಕಲಿಗಾಲದಲ್ಲಿ! ಅದೂ ಐದು ಸಾವಿರ ವರ್ಷಗಳು ಕಳೆದ ಮೇಲೆ, ಅವರಿಗೂ ತುಂಬಾ ಕನ್‌ಫ್ಯೂಷನ್ನು ಭಕ್ತಿಯಿಂದಲೇ ಮುಕ್ತಿ ಎಂದು ಕೆಲವರು. ಅದರಲ್ಲೂ ಶಿವಭಕ್ತಿ, ವಿಷ್ಣುಭಕ್ತಿ, ದೇವೀಭಕ್ತಿ ಇತ್ಯಾದಿ ಎಂದು ಕೆಲವರು ತಮ್ಮ ತಮ್ಮಲ್ಲೇ ಕಾದಾಡುತ್ತಿದ್ದಾರೆ. ಇನ್ನು ಕೆಲವರು ಅಲ್ಲ, ಗಾಡ್ ಎನ್ನುತ್ತಾರೆ. ತಮ್ಮ ಗುಂಪಿಗೆ ಜನರನ್ನೆಳೆದುಕೊಳ್ಳಲು ಹಣ, ಹೆಂಡ, ಹೆಣ್ಣು ಎಂಬ 'ತ್ರಿ ಹಕಾರ' ಗಳನ್ನು ಬಳಸುತ್ತಾರಂತೆ. ಹೀಗಿವರು ಕಿತ್ತಾಡುತ್ತಿದ್ದರೆ ಜ್ಞಾನದಿಂದಲೇ ಮುಕ್ತಿ ಎಂದು ಕೆಲವರು. ಇವರ ಗತಿಯೇನು?'' ಎಂದರು.

ವಿಷ್ಣುವು ''ಗುಂಪುಗಟ್ಟುವುದರಿಂದ, ಹೊಡೆದಾಟದಿಂದ ದೊಡ್ಡ ಮಾತಾಡಿ ಹಣ ಕಮಾಯಿಸುವುದರಿಂದ, ಬಹು ಮತದಿಂದ ನಾನು ಸಿಕ್ಕುವುದಿಲ್ಲ, ಹಣದಾಹಿಗಳು ಈ ಜನ್ಮದಲ್ಲೇ ಕೆಟ್ಟು ಮುಂದಿನ ಜನ್ಮದಲ್ಲಿ ಹುಚ್ಚರಾಗಿ, ನಂತರ ತಿರ್ಯಗ್ಯೋನಿಗಳಲ್ಲಿ ಜನಿಸುತ್ತಾರೆ. ಇದಕ್ಕಿರುವುದು ಒಂದೇ ಉಪಾಯ. ಸತ್ಸಂಗದಿಂದ ಭಗವಂತನ ಸಾಕ್ಷಾತ್ಕಾರ. ಸತ್ಸಂಗವಿಲ್ಲದವರು ತುರುಚೆ ಸೊಪ್ಪಿನಂತೆ ತಾವೂ ಸುಖವನ್ನು ಕಾಣರು. ಲೋಕಕ್ಕೂ ಕಂಟಕರು'' ಎಂದನು. ನಾರದರು ''ಹಾಗಾದರೆ ನಾರಾಯಣ, ಸತ್ಸಂಗದ ಮಹಿಮೆಯನ್ನು ತಿಳಿಯುವುದು ಹೇಗೆ? ಯಾರಿಂದ?'' ಎಂದು ಕೇಳಿದರು.

ವಿಷ್ಣುವು ಮಂದಹಾಸವನ್ನು ಬೀರಿ ''ನಾರದ, ಈಗ ಭೂಲೋಕಕ್ಕಿಳಿದು ನೈಋತ್ಯ ದಿಕ್ಕಿಗೆ ಹೋಗು, ದಾರಿಯಲ್ಲಿ ಒಂದು ಹೆಂಟೆಗೊದ್ದವು, ಸಗಣಿಯ ಉಂಡೆಯನ್ನು

ಉರುಳಿಸಿಕೊಳ್ಳುತ್ತಾ ಬರುತ್ತಿದೆ ಅದನ್ನು ಕೇಳು'' ಎಂದನು. ನಾರದರು ಆ ದಿಕ್ಕಿನಲ್ಲಿ ಹೋಗುತ್ತಿರುವಾಗ ಹೆಂಟೆ ಗೊದ್ದವು ಕಾಣಿಸಿತು. ನಾರದರು ಅದಕ್ಕೆ ನಮಸ್ಕರಿಸಿ ''ನನಗೆ ಸತ್ಸಂಗದ ಮಹಿಮೆಯನ್ನು ತಿಳಿಸು'' ಎಂದರು. ಕೂಡಲೇ ಆ ಹೆಂಟೆಗೊದ್ದವು ಅಸುನೀಗಿತು. ನಾರದರು ''ಅಯ್ಯೋ ಇದೇನು ಮಹಾಪಾಪ'' ಎಂದು ವಿಷ್ಣುವಿನ ಬಳಿಗೆ ಹೋಗಿ ವರದಿಯಿತ್ತರು. ವಿಷ್ಣುವು ನಕ್ಕು ''ಮೂರು ತಿಂಗಳ ಮೇಲೆ ಬಾ'' ಎಂದನು. ನಾರದರು ''ನಾರಾಯಣ'' ಎನ್ನುತ್ತ ನಿರ್ಗಮಿಸಿದರು ಮೂರು ತಿಂಗಳ ನಂತರ ಸನ್ನಿಧಿಗೆ ಹಾಜರಾದರು.

''ಪ್ರಭೂ ಸತ್ಸಂಗದ ಮಹಿಮೆಯನ್ನು ತಿಳಿಸು'' ಎಂದರು. ವಿಷ್ಣುವು ''ನಾರದಾ ಭೂಲೋಕಕ್ಕೆ ಹೋಗಿ ಉತ್ತರ ದಿಕ್ಕಿಗೆ ನಡೆಯುತ್ತಿರು. ಆಗ ಒಂದು ಹಂಸವು ಬರುತ್ತದೆ ಅದನ್ನು ಕೇಳು'' ಎಂದನು.

ನಾರದರು ಮೇರು ಪರ್ವತದತ್ತ ನಡೆಯುತ್ತಿರಲು ರಾಜಹಂಸವೊಂದು ಬಂದು ಅವರಿಗೆ ನಮಸ್ಕರಿಸಿತು. ನಾರದರು ಪ್ರತಿಯಾಗಿ ವಂದಿಸಿ ''ಭೋ ರಾಜಹಂಸ ಸತ್ಸಂಗದ ಮಹಿಮೆಯನ್ನು ತಿಳಿಸು'' ಎಂದರು. ಕೂಡಲೇ ಆ ರಾಜ ಹಂಸವು ಸತ್ತು ಬಿದ್ದಿತು. ನಾರದರು ''ಶಾಂತಂ ಪಾಪಂ, ನಾರಾಯಣಾ ಇದೇನು ಘೋರ. ಸತ್ಸಂಗವೆಂದ ಕೂಡಲೇ ಆಗ ಹೆಂಟೆಗೊದ್ದ ಸತ್ತಿತು. ಈಗ ಈ ರಾಜಹಂಸ. ಸತ್ಸಂಗವೆಂದಕೂಡಲೇ ಇವೇಕೆ ಸತ್ತವು?'' ಎಂದು ಮುಖ ಬಾಡಿಸಿಕೊಂಡು ವಿಷ್ಣುವಿನ ಸನ್ನಿಧಿಗೆ ಹೋಗಿ ವರದಿಯನ್ನು ಒಪ್ಪಿಸಿದನು.

ಶ್ರೀಮನ್ಮಹಾವಿಷ್ಣುವು ಲೋಕ ಮೋಹಕವಾದ ಮಂದಹಾಸವನ್ನು ಬೀರಿ ''ನಾರದಾ, ನಿನಗೆ ತಿಳಿಯಲಿಲ್ಲವೇ? ಪಾಪ! ಇನ್ನೊಂದು ವರ್ಷ ಬಿಟ್ಟು ಬಾ'' ಎಂದನು.

ನಾರದರು ಕರಾರುವಾಕ್ಕಾಗಿ ಒಂದು ವರ್ಷದ ನಂತರ ವಿಷ್ಣುವನ್ನು ಕಂಡು ವಂದಿಸಿದರು.

''ನಾರದ, ಮೇರು ಪರ್ವತವನ್ನು ಸೇರಿ ಪೂರ್ವದಿಕ್ಕಿಗೆ ನಡೆ, ಒಂದು ಮನೆ ಸಿಗುತ್ತದೆ. ಒಳಕ್ಕೆ ಹೋಗು, ಯಾರಾದರೂ ಬಂದು ಕೇಳಿದರೆ, ಈ ಮನೆಯಲ್ಲಿ ಈಚೆಗೆ ಹುಟ್ಟಿದ ಶಿಶುವನ್ನು ತೋರಿಸಿ ಎನ್ನು. ಆ ಮಗುವನ್ನು ಕೇಳು, ಅದು ನಿನಗೆ ಸತ್ಸಂಗದ ಮಹಿಮೆಯನ್ನು ತಿಳಿಸುತ್ತದೆ'' ಎಂದನು.

ನಾರದರು ''ನಾರಾಯಣ ನೀನೇ ನನ್ನ ಗತಿ, ಕರ್ತ ನನ್ನ ಪ್ರಭು, ಸಾಕ್ಷಿ, ನೀನೇ ನನ್ನ ಸರ್ವಸ್ವ, ಆದರೆ ನೀನು ಹೇಳಿದ ಕೆಲಸವನ್ನು ನಾನು ಬಿಲ್ಕುಲ್ ಮಾಡುವುದಿಲ್ಲ'' ಎಂದರು.

ವಿಷ್ಣುವು ''ಹೆದರಬೇಡ, ನನ್ನಾಣೆಗೂ ಆ ಮಗು ಸಾಯುವುದಿಲ್ಲ'' ಎಂದನು.

ನಾರದರು ಮೇರು ಪರ್ವತಕ್ಕೆ ಬಂದರು. ಈ ಪರ್ವತ ಯಾವುದು ಎನ್ನುವಿರೋ? ಕಾಳಿದಾಸ ಹೇಳಿಲ್ಲವೇ ''ಅಸ್ತ್ಯುತ್ತರ, ಸ್ಯಾಂ ದಿಶಿ ದೇವತಾತ್ಮಾ, ಹಿಮಾಲಯೋ ನಾಮ ನಗಾಧಿರಾಜಃ'' ಅಂತ. ಅದೇ! ಕಾಳಿದಾಸ ಯಾರು ಎನ್ನುವಿರೋ? ನಿಮಗೆ ನಯಿಪಾಲ್, ಖುಷವಂತಸಿಂಗ್ ಅನಂತಮೂರ್ತಿಗಳೇ ಗತಿ, ಬೇಕಿದ್ದರೆ ಮಿಲನ್ ಕುಂದರಾ ಓದಿ. ಕಾಪಿ ಹೊಡೆಯಿರಿ. ಹೋಗುತ್ತಾ ಹೋಗುತ್ತಾ ಒಂದು ಮನೆ ಕಂಡಿತು. ವಿದ್ಯುದ್ದೀಪಗಳಿಲ್ಲದಿದ್ದರೂ ಝಗ ಝಗ ಬೆಳಕಿತ್ತು ನಾರದರು ಹೋಗಿ ಒಳಗೆ ನಿಂತರು. ಯಾರೋ ಬಂದು ''ಏಕೆ ಬಂದಿರಿ'' ಎಂದು ಕೇಳಿದರು. ''ಈ ಮನೆಯಲ್ಲಿ ಈಚೆಗೆ ಹುಟ್ಟಿರುವ ಮಗುವನ್ನು ತಂದು ತೋರಿಸಿ'' ಎಂದು ನಾರದರು ಕೇಳಿದರು. ಮಗುವನ್ನು ಒಂದು ಮೊರದಲ್ಲಿ ತಂದು ನಾರದರ ಮುಂದಿಟ್ಟರು. ನಾರದರು ಆ ಮಗುವಿಗೆ ನಮಸ್ಕರಿಸಿ ''ಹೇ ನವಜಾತ ಶಿಶುವೇ, ನನಗೆ ಸತ್ಸಂಗದ ಮಹಿಮೆಯನ್ನು ತಿಳಿಸು'' ಎಂದರು. ಆ ಮಗುವು ಆ ಕೂಡಲೇ ಪ್ರಾಣ ಬಿಟ್ಟಿತು.

''ಅಯ್ಯೋ ಇದೇನು ಮಹಾಘೋರ? ನಾರಾಯಣನೂ ಸುಳ್ಳು ಹೇಳಿದನಲ್ಲಾ'' ಎಂದು ನಾರದರು ವೈಕುಂಠಕ್ಕೆ ಬಂದು

''ನಾರಾಯಣಾ, ನೀನು ಸುಳ್ಳು ಹೇಳಿದೆಯಲ್ಲಾ; ಇದು ತರವೇ? ಸದ್ರೂಪನಾದ ನಿನ್ನಲ್ಲಿ ಇದೆಂಥ ವಂಚನೆ?'' ಎಂದರು.

ಶ್ರೀಮನ್ಮಹಾವಿಷ್ಣುವು ನಸುನಕ್ಕನು, ಅಷ್ಟರಲ್ಲಿ ವಿಷ್ಣುವಿಗೆ ಸಮಾನರೂಪಿಯಾದ ಸಾರೂಪ್ಯಮುಕ್ತಿ ಭಾಜನನಾದ ಒಬ್ಬನು ಬಂದು, ವಿಷ್ಣುವಿಗೆ ವಂದಿಸಿದನು, ಅವನ ಅಪ್ಪಣೆಯಂತೆ ನಾರದನಿಗೆ ವಂದಿಸಿ ಹೀಗೆಂದು ಹೇಳಿದನು.

''ಹೇ ದೇವರ್ಷಿ, ಪಾಪಕರ್ಮಗಳಿಂದ ಸಗಣಿ ಹುಳವಾಗಿದ್ದೆ. ನಿನ್ನ ದರ್ಶನದಿಂದ ಹಂಸವಾದೆ, ಮತ್ತೆ ನಿನ್ನ ಸಂಗದ ಮಹಿಮೆಯಿಂದ ಶಿಶುವಾದೆ. ಮತ್ತೆ ನಿನ್ನ ಸಾಮಿಪ್ಯದಿಂದ ಸಾರೂಪ್ಯ ಮುಕ್ತಿಯನ್ನು ಪಡೆದೆ. ಎಲೈ ಮಹಾತ್ಮನೇ, ನಿನ್ನ ಸಂಗದಿಂದ ದೊರೆಯದಿರುವುದು ಯಾವುದು?''

ಇಲ್ಲಿಗೆ ಈ ಕತೆ ಮುಗಿಯಿತು.

ಕೆಲವು ಪ್ರಶ್ನೆಗಳೇಳುತ್ತವೆ. ಅಂತಹ ಸತ್ಸಂಗ ಈಗ ದೊರೆಯುತ್ತದೆಯೇ? ಬಯಸಿದವರಿಗೆ ದೊರೆತೇ ದೊರೆಯುತ್ತದೆ ಎನ್ನುವುದು ಉತ್ತರ. ಅಂತಹವರಿದ್ದರೂ ಈಗೇಕೆ ಹೀಗಾಗುತ್ತದೆ. ಯಾರಿಗೆ ಏನು ಬಯಕೆಯೋ ಅದು ಸಿಗುತ್ತದೆ. ಇದೆಲ್ಲಾ

ಎಂದೆಂದೂ ಇರುವುದು ಹೀಗೆಯೇ? ಉದಾರವಾದ, ಸಮವಾದ ಇವೆಲ್ಲಾ ದುಬ್ಬರ ಮೂಗುಗಳಿಗೆ ಬಳಿಯುವ ತುಪ್ಪಗಳು; ಇನ್ನು ಮಾನವೀಯತೆ, ವೈಜ್ಞಾನಿಕ ಚಿಂತನೆ ಇವೆಲ್ಲ ಏನು ಅವು finest jokes; ಪ್ರಗತಿ ಎಂದರೆ ಅದು ಫ್ಯಾಂಟಸಿ; ಎನ್ನುತ್ತಾರೆ.

★★★



"ನೀನು ಯಾಕೆ ಹೀಗೆ ನನ್ನ ಕಂಫರ್ಟ್ ಜೋನ್‌ನಲ್ಲಿ ಬಂದ್ಬಿಟ್ಟಿದ್ದೀಯಾ?"

# ತೇಪೆಗಾರಿಕೆಯ ಕಲೆ

– ಎಸ್.ಎನ್. ಶಿವಸ್ವಾಮಿ

ನಿತ್ಯಜೀವನದಲ್ಲೊದಗುವ ವೈಮನಸ್ಸುಗಳಿಂದ ಹಿಡಿದು ರಾಷ್ಟ್ರ ನಿರ್ಮಾಣದ ಬೃಹತ್ಕಾರ್ಯದ ಫಜೀತಿಗಳವರೆಗಿನ ಎಲ್ಲಾ ಪ್ರಕರಣಗಳಲ್ಲೂ ತೇಪೆಗಾರಿಕೆಯ ಅವಶ್ಯಕತೆ ಇದ್ದೇ ಇರುತ್ತದೆ. ಈ ಕೆಲಸಕ್ಕೆ ಶ್ರದ್ಧೆ, ಚಾತುರ್ಯಗಳೂ ಇದ್ದೇ ಇರಬೇಕು. ತೇಪೆಹಾಕುವ ಕೆಲಸದಲ್ಲಿ ನೈಪುಣ್ಯವಿದ್ದಿದ್ದ ಪಕ್ಷದಲ್ಲಿ ಮಾಜಿ ಪ್ರಧಾನಿ ನರಸಿಂಹರಾಯರು ಮಾಜಿಯಾಗದೆ ಇನ್ನೂ ಹಾಲಿ ಪ್ರಧಾನಿಯಾಗಿಯೇ ಉಳಿದಿದ್ದಿರಬಹುದೇನೋ! ತಾಳ್ಮೆಯ ರಿಪೇರಿ ಮಾಡಲು ತೇಪೆ ಹಾಕುವುದಕ್ಕೆ ತುಂಬಿದ ಸೂಟ್‌ಕೇಸುಗಳೇ ಸೂಕ್ತವೆಂದು ನಂಬಿ ನರಸಿಂಹರಾಯರು ಹಳ್ಳಕ್ಕೆ ಬಿದ್ದರು. ಮೊಂಡು ಶಾಸಕರ ಮನವೊಲಿಸಲು ಅವರು ಯಾರ ಕಣ್ಣಿಗೂ ಬೀಳದಂಥ ಬೇರೆ ಅಂದರೆ ಉನ್ನತ ಪದವಿ, ಲಾಭದಾಯಕ ಅಧಿಕಾರ, ಇಂಥಾ ಆಮಿಷಗಳನ್ನು ಒಡ್ಡದೆ ಮೋಸ ಹೋದದ್ದು ಎಲ್ಲರಿಗೂ ಆಶ್ಚರ್ಯವುಂಟುಮಾಡಿದೆ.

ರಾಜಕಾರಣ ಹಾಗಿರಲಿ. ನಮ್ಮ ನಿಮ್ಮ ಸಾಮಾಜಿಕ ಸಂಬಂಧಗಳನ್ನೇ ನೋಡೋಣ. ಮುದುಡಿದ ಮನಸ್ಸುಗಳಿಗೆ ತೇಪೆ ಹಾಕಬೇಕಾದರೆ ಹಣದ ಜತೆಗೆ ಮರುಳು ಮಾಡಿಸುವ ಮೃದುವಚನವೂ ಉಪಯೋಗಕ್ಕೆ ಬರುತ್ತೆನ್ನುವುದು ನಮ್ಮೆಲ್ಲರ ಅನುಭವವಾಗಿದೆ. ಮನೆಯಲ್ಲಲ್ಲದೆ ಹೊರಗೂ ಮನಸ್ಸುಗಳ ತೇಪೆಗಾರಿಕೆ ನಿರಂತರವಾಗಿ ನಡೆಯುತ್ತಲೇ ಇರಬೇಕಾದದ್ದು ಅತ್ಯಗತ್ಯ. ಆಫೀಸುಗಳಲ್ಲಿ ಟೈಪಿಂಗ್, ನೋಟಿಂಗ್, ಫೈಲಿಂಗ್ ಇತ್ಯಾದಿ ಚಿಲ್ಲರೆ ಕೆಲಸ ಮಾಡುವವರು ತಾವು ಮಾಡುವ ತಪ್ಪುಗಳನ್ನು ತೇಪೆಗಳಿಂದ ಮುಚ್ಚಿ ಕಾಗದಗಳನ್ನು ಮೇಲಕ್ಕೆ ಕಳಿಸುವುದನ್ನೇ ಒಂದು ಕುಶಲಕಲೆಯನ್ನಾಗಿ ತಿಳಿದುಕೊಂಡಿರುತ್ತಾರೆ.

ಸರಕಾರಿ ಕೆಲಸವೆಂದರೆ ಮುನಿಸಿಪಾಲಿಟಿಗಳ ಕೆಲಸವನ್ನೂ ಲೆಕ್ಕಕ್ಕೆ ತೆಗೆದುಕೊಳ್ಳಬೇಕಷ್ಟೇ. ಅಲ್ಲಿನ ತೇಪೆಗಾರಿಕೆಯ ವಿಶೇಷ ಆಫೀಸಿನೊಳಗೆ ಮಾತ್ರವಲ್ಲದೆ ಹೊರಗಿನ ಕಾಮಗಾರಿಯಲ್ಲೂ ಯಥೇಚ್ಛವಾಗಿ ಪ್ರಕಟಗೊಳ್ಳುತ್ತದೆ. ತೇಪೆಗಾರಿಕೆಯ ಕೆಲಸ ತಿಳಿಯದ ಮುನಿಸಿಪಲ್ ನೌಕರ ಅಲ್ಲಿ ಅಯೋಗ್ಯನೆನ್ನಿಸಿಕೊಳ್ಳುತ್ತಾನೆ. ರಸ್ತೆಗಳು, ಒಳಚರಂಡಿಗಳು, ನೀರು ಕೊಳವೆಗಳು ನಿರ್ಮಾಣವಾಗುತ್ತಿರುವಂತಯೇ ಅವರು ಅವುಗಳ ಭವಿಷ್ಯದ ರಿಪೇರಿಗಳಲ್ಲಿ ತಾವು ಸಂಪಾದಿಸಬಹುದಾದ ಲಾಭವನ್ನು ಎಣಿಸಿಕೊಂಡಿರುತ್ತಾರೆ ಎನ್ನುವುದು

ನನ್ನ ಅಂದಾಜು. ಹೊಂಡಗಳು ಮತ್ತೆ ಮತ್ತೆ ಬೀಳುತ್ತಿರುವಂತೆ ಕಳಪೆ ಕೆಲಸ ಮಾಡುವುದು ಇವರಿಗೆ ಚೆನ್ನಾಗಿ ಗೊತ್ತು. ಹೊಂಡ ಕಂಡ ಸಾರ್ವಜನಿಕರು ಅದನ್ನು ಮುಚ್ಚಬೇಕೆಂದು ಆಗ್ರಹ ಮಾಡತೊಡಗಿದ ಕೂಡಲೇ ಇವರು ತೇಪೆ ಕೆಲಸ ಆರಂಭಿಸುವುದಿಲ್ಲ. ಸ್ಕೂಟರು, ಚಿಕ್ಕ ಕಾರುಗಳು ಅದರಲ್ಲಿ ಸಿಕ್ಕಿ ಬೀಳುವ ತನಕ ಕಾದಿದ್ದರೆ ತೇಪೆ ಹಾಕುವವರಿಗೆ ಲಾಭ ಹೆಚ್ಚು. ಅಷ್ಟು ಹೊತ್ತಿಗೆ, ಅಂದರೆ ಅದರ ತೇಪೆಗೆಲಸಕ್ಕೆ ಕೈಹಾಕುವ ಮೊದಲೇ ಮತ್ತೊಂದು ಹೊಂಡ ರಿಪೇರಿಗಾಗಿ ಬಾಯಿ ತೆರೆದುಕೊಂಡು ಸಿದ್ಧರಾಗುತ್ತಾರೆ. ಹೀಗೆ ಮುನಿಸಿಪಾಲಿಟಿಯ ನೌಕರರು ಹೊಂಡಗಳ ಸರಪಳಿ ಮುಗಿಯದ ಹಾಗೆ ನೋಡಿಕೊಂಡರೆ ಕಂಟ್ರಾಕ್ಟರುಗಳಿಗೆ ಆದಾಯ, ತಮಗೆ ಮಾಮೂಲಿ, ತಡೆಯಿಲ್ಲದೆ ಹರಿದು ಬರುತ್ತಿರುತ್ತದೆ. ಹೊಂಡಗಳಿಗೆ ತೇಪೆ ಹಾಕುವ ಹಾಗೇ ಇನ್ನೊಂದು ದ್ರವ್ಯಮೂಲವಿದೆ. ಅದೇ ಸೋರುವ ನೀರು ಕೊಳಾಯಿಗೆ ತೇಪೆಹಾಕುವುದು. ಒಂದು ಕಡೆ ಸೋರಿಕೆ ನಿಲ್ಲಿಸುವಷ್ಟರಲ್ಲಿ ಇನ್ನೊಂದು ಕಡೆ ಅದು ಪ್ರಾರಂಭಿಸುವಂತೆ ಏರ್ಪಾಡು ಹೊಂದಿಕೊಳ್ಳುವುದೇ ಜಾಣತನ.

ರಸ್ತೆ ರಿಪೇರಿ, ಭೂಗತ ಚರಂಡಿಗಳ ರಿಪೇರಿ, ನೀರು ಕೊಳವೆಗಳ ರಿಪೇರಿ, ಫೋನ್, ವಿದ್ಯುಚ್ಛಕ್ತಿ ತಂತಿಗಳ ರಿಪೇರಿ, ಈ ಕೆಲಸಗಳಲ್ಲಿ ನಿರತರಾದ ಬೇರೆ ಬೇರೆ ಇಲಾಖೆಗಳ ಸಿಬ್ಬಂದಿ, ದಿನಗೂಲಿವರ್ಗ, ಕಂಟ್ರಾಕ್ಟರುಗಳು, ಮೇಸ್ತ್ರಿಗಳು ಪರಸ್ಪರ ಹೊಂದಾಣಿಕೆ ಮಾಡಿಕೊಂಡು, ಮನೆ ಕಟ್ಟುತ್ತಿರುವವರ ಜತೆಗೂ ಕೈ ಮಿಲಾಯಿಸಿ, ರಸ್ತೆಗಳನ್ನು ಉದ್ದಕ್ಕೂ, ಅಗಲಕ್ಕೂ ಅಗೆಯುತ್ತ, ತೇಪೆ ಹಾಕುತ್ತ, ಆ ಕೆಲಗಳನ್ನು ಅದೇ ಜಾಗದಲ್ಲಿ ಸರದಿಯ ಪ್ರಕಾರ ಒಬ್ಬೊಬ್ಬರಾಗಿ ಕೈಗೊಳ್ಳುತ್ತಿದ್ದರೆ, ಪಾದಚಾರಿಗಳಿಗೆ, ವಾಹನಗಳಿಗೆ ಶಾಶ್ವತ ಅಡಚಣೆಗಳನ್ನು ಸೃಷ್ಟಿಸುವುದರಲ್ಲಿ ಸಫಲರಾಗುತ್ತಾರಲ್ಲದೆ ಅವರು ತೇಪೆಗಾರಿಕೆಯನ್ನೇ ಒಂದು ವೃತ್ತಿಯಾಗಿ ಬೆಳೆಸಿಕೊಂಡು ರಿಪೇರಿ ಬ್ರಹ್ಮರಾಗಿ ರಾರಾಜಿಸುತ್ತಾರೆ ಅನ್ನುವುದನ್ನು ದಿನ ಬೆಳಗಾದರೆ ನಾವು ನೋಡುತ್ತಲೇ ಇದ್ದೇವೆ.

ರಾಜಕೀಯದಲ್ಲಿ, ಸಾರ್ವಜನಿಕ ಕಾರ್ಯಕಲಾಪಗಳಲ್ಲಿ ತೇಪೆಗಾರಿಕೆಯ ಕಲೆ ಎಷ್ಟು ಅವಶ್ಯಕವೋ, ನಮ್ಮ, ಅಂದರೆ ನಮ್ಮ ನಿಮ್ಮಂಥ ಸಾಧಾರಣ ನಾಗರಿಕರ ಜೀವನದ ಪ್ರತಿಯೊಂದು ತಿರುವಿನಲ್ಲಿ ಅವಶ್ಯಕ ತಿನ್ನುವುದನ್ನು ನಮ್ಮ ನಾಡಿನ ಅನುಭವಗಳಿಂದ ಗ್ರಹಿಸಬಹುದು. ಅಂತ ಅನುಭವಗಳ ಕ್ಷಿಪ್ರ ಅವಲೋಕನವೇ ಇದು.

ಹಿಂದಿನ ಕಾಲದಲ್ಲಿ ಹರಿದ ಬಟ್ಟೆಗಳನ್ನು ಲಾಂಡ್ರಿಗೆ ಕೊಟ್ಟಾಗ ಲಾಂಡ್ರಿಯವರು, ಅದರಲ್ಲೂ ಚೀಸೀ ಲಾಂಡ್ರಿಯವರು ಡಾರ್ನಿಂಗ್ ಅನ್ನುವ

ಕುಸುರಿ ಕೆಲಸ ಮಾಡಿ ಬಟ್ಟೆಯ ಹರಕು ಕಣ್ಣಿಗೇ ಕಾಣಿಸದೆ ಹಾಗೆ ತೇಪೆ ಹಾಕಿ ಹಿಂತಿರುಗಿಸುತ್ತಿದ್ದರು. ಈಗ ಡಾರ್ನಿಂಗ್ ಅನ್ನುವ ನುಣುಪು ಕಲೆಯೇ ಇಲ್ಲದಂತೆ ನಶಿಸಿಹೋಗಿದೆ. ನನ್ನ ಬಟ್ಟೆ ಹರಿದರೆ ನಾನು ಅದರ ರಿಪೇರಿಗಾಗಿ ನಮ್ಮ ಕುಟುಂಬದ ವರ್ತನೆ ದರ್ಜಿ, ಚಕ್ರಪಾಣಿಗೆ ಕೊಡುತ್ತೇನೆ. ಚಕ್ರಪಾಣಿಗೆ ನಾನು ಕೊಡುವ ಉಡುಪಿನ ಬಣ್ಣದ ತುಂಡು ಬಟ್ಟೆ ಯಾವಾಗಲೂ ಸಿಕ್ಕಿದಂತಿಲ್ಲ. ಅವನು ಅದಕ್ಕೆ ತೀರ ವಿರುದ್ಧ ಬಣ್ಣದ ಬಟ್ಟೆ ಚೂರನ್ನು ಎಲ್ಲಿಂದಲೋ ಹುಡುಕಿ ತೆಗೆದು ಅಳವಡಿಸಿ ಹೊಲಿದು ಕೊಟ್ಟು ಬಿಡುತ್ತಾನೆ. ಬೇರೆ ದರ್ಜಿಗಳು ತೇಪೆ ಕೆಲಸಗಳಿಗೆ ತಮ್ಮಲ್ಲಿ ಅವಕಾಶವಿಲ್ಲವೆಂದು ಖಡಾಖಂಡಿತವಾಗಿ ಹೇಳಿ ಆ ಕೆಲಸವನ್ನು ನಿರಾಕರಿಸುತ್ತಾರೆ. ಆದರೆ ಚಕ್ರಪಾಣಿ ತನ್ನ ಜಗುಲಿ ಮೂಲೆಯಲ್ಲಿ ಹಳೆಯ ಕೈಮಿಷಿನ್ನಿನ ಮೇಲೆ ಕೈಯಾಡಿಸುತ್ತಾ ಹಗಲೂ ಇರುಳೂ ಹೊಲಿಯುತ್ತಲೇ ಇರುತ್ತಾನಾದ್ದರಿಂದ ಅವನಿಗೆ ಇತರ ದರ್ಜಿಗಳ ಏಳಿಗೆಯ ಸುಳಿವೇ ಇಲ್ಲ. ಬಣ್ಣಬಣ್ಣದ ತೇಪೆಗಳೇ ಈಗಿನ ಉಡುಪುಗಳ ಹೊಸ ಫ್ಯಾಷನ್ ಆಗಿರುವ ಸಂಗತಿಯೂ ಅವನಿಗೆ ತಿಳಿಯದು. ಅವನು ಹಳೆಯದರ ಇಸಮು. ಅವನಿಗೆ ಉಡುಪು ತಯಾರಿಕೆಯ ಈ ಆಧುನಿಕ ವರಸೆಗಳು ಹೇಗೆ ತಿಳಿಯಬೇಕು! ನಾವು ಅವನ ಅಜ್ಞಾನದ ಲಾಭ ಪಡೆದು ಚಕ್ರಪಾಣಿಯನ್ನು ತೇಪೆಗೆಲಸಕ್ಕೆಂದೇ ನೇಮಿಸಿಕೊಂಡು ಅವನನ್ನು ತ್ಯಾಪಣ್ಣ ಅಂತ ಅನ್ವರ್ಥಕನಾಮದಿಂದ ಕರೆಯುತ್ತಿದ್ದೇವೆ.

ನಮ್ಮ ಅಜ್ಜಿ ಚೂರುಪಾರು ಬಟ್ಟೆಗಳನ್ನು ಆಚೆಗೆಸೆಯದೆ, ಅವುಗಳನ್ನು ಚಿತ್ತಾರವಾಗಿ ಸೇರಿಸಿ ಕೈಹೊಲಿಗೆ ಹಾಕಿ ನಮಗೆಲ್ಲ ಚಳಿಗೆ ಹೊದೆಯಲು ಹಚ್ಚಡ ಒದಗಿಸುತ್ತಿದ್ದ ದಿನಗಳು ನೆನಪಿಗೆ ಬರುತ್ತವೆ. ಈಗ ಅಂಥ ಬಣ್ಣಬಣ್ಣದ ಕವುದಿಗಳು ಒಂದು ಹೊಸ ಫ್ಯಾಷನ್ ಅನ್ನಿಸಿಕೊಂಡು ದೊಡ್ಡ ದೊಡ್ಡ ಮಳಿಗೆಗಳಲ್ಲಿ ಮಾರಾಟವಾಗುತ್ತಿದೆ.

ತೇಪೆಗಾರಿಕೆಯ ಇನ್ನೊಂದು ನಿದರ್ಶನ ವೈದ್ಯಕೀಯ ರಂಗದಲ್ಲಿ ಕಾಣಸಿಗುತ್ತದೆ. ನಾಲ್ಕು ರಸ್ತೆಗಳು ಸೇರುವ ಚೌಕದಲ್ಲಿ, ಅದರಲ್ಲೂ ಇಂದಿನ ಸಂಚಾರ ಅವ್ಯವಸ್ಥೆಯಲ್ಲಿ, ರಸ್ತೆ ಅಪಘಾತಗಳಾಗುತ್ತಿರುವುದು ಸಹಜ. ಅವುಗಳಲ್ಲಿ ಗಾಯಗೊಂಡವರ ಪ್ರಥಮ ಚಿಕಿತ್ಸೆ, ದ್ವಿತೀಯ ಚಿಕಿತ್ಸೆ, ಅಂತಿಮ ಚಿಕಿತ್ಸೆಗಳ ಅನುಕೂಲಕ್ಕಾಗಿ ಚೌಕದ ಹತ್ತಿರವೇ ಒಂದಲ್ಲ ಒಂದು ಆಸ್ಪತ್ರೆ ತಲೆದೋರಿರುತ್ತದೆಯಷ್ಟೇ. ಇಲ್ಲಿ ಹಾಕುವ ತೇಪೆಗಳನ್ನು ಪ್ಲಾಸ್ತ್ರಿ, ಮುಲಾಯಂ ಪಟ್ಟಿ ಎಂದೆಲ್ಲ ಕರೆಯುತ್ತಾರೆ. ತೀವ್ರ ಗಾಯಗಳಿಗೆ ತುರ್ತಿನ ಪಟ್ಟಿಗಳನ್ನು ಸುತ್ತಿರುತ್ತಾರೆ. ಆದರೆ ಇತರ ಸಣ್ಣಪುಟ್ಟ ಗಾಯಗಳ ತೇಪೆಗಳು ಓರಣವಾಗಿದ್ದು

ನೋಡುವವರ ಮೆಚ್ಚಿಗೆ ಗಳಿಸುವಂತಿರುತ್ತದೆ. ತೇಪೆಗಳನ್ನು ಸರಿಯಾದ ಆಕೃತಿಗಳಲ್ಲಿ ಕತ್ತರಿಸಿ ಅಂಟಿಸುವುದೂ ಒಂದು ಕಲೆ. ತೇಪೆಗಳು ಅಚ್ಚುಕಟ್ಟಾಗಿದ್ದರೆ ಅವುಗಳನ್ನು ಪ್ರದರ್ಶಿಸಲು ಹೆಚ್ಚಾಗಿ ಹಿಂತೆಗೆಯುವುದಿಲ್ಲ. ಅವುಗಳನ್ನು ನೋಡುವವರೂ 'ಆಹಾ, ನಾವೂ ಅಪಘಾತಕ್ಕೆ ಸಿಕ್ಕಿದರೆ ಇಂಥ ಶಿಸ್ತಿನ ಆಸ್ಪತ್ರೆಗೇ ದಾಖಲಾಗಬೇಕು'' ಎಂದುಕೊಳ್ಳುವಂತೆ ಅವು ಆಕರ್ಷಕವಾಗಿರಬೇಕು. ಒಟ್ಟಿನಲ್ಲಿ ಕುಶಲ ತೇಪೆದಾರಿಕೆಯಿಂದ ಆಸ್ಪತ್ರೆಯ ವಾತಾವರಣಕ್ಕೇ ಒಂದು ಕಳೆ ಬಂದಂತಾಗುವುದರಲ್ಲಿ ಸಂದೇಹವಿಲ್ಲ.

ಅಪಘಾತದ ಚಿಕಿತ್ಸೆಗಳಿಗೆ ಒದಗುವ ಈ ಔಷಧಾಲಯಗಳಲ್ಲಲ್ಲದೆ ವೈದ್ಯಕೀಯ ಪರಿಣಿತರ ಸಹಾಯ ಸೌಂದರ್ಯವರ್ಧನ ತೇಪೆಕೆಲಸದಲ್ಲೂ ಅತ್ಯಗತ್ಯ. ಮುರುಕು ಹಲ್ಲುಗಳ ದುರಸ್ತಿ, ಹುಳುಕು ಚರ್ಮದ ಬದಲಾವಣೆ, ಮೂಗಿನ ಆಕಾರದಲ್ಲಿ ಸುಧಾರಣೆ, ಈ ತರಹದ ತೇಪೆಗೆಲಸಗಳನ್ನು ನೆರವೇರಿಸಲು ವಿಶೇಷ ವೈದ್ಯದ ನೆರವು ಬೇಕು.

ಹೀಗೆ ಮನುಷ್ಯನ ದೇಹಕ್ಕೆ ತೇಪೆಗಳ ಅವಶ್ಯಕತೆ ಬೀಳುವ ಹಾಗೆಯೇ ವಾಹನಗಳಿಗೂ ಬೀಳುತ್ತದೆ. ಸ್ಕೂಟರ್, ಕಾರ್‌ಗಳನ್ನು ಇನ್ನೂ ಪಡೆಯದ ಸೈಕಲ್ ಒಡೆಯರಿಗೂ ಟೈರು ಟ್ಯೂಬ್‌ಗಳ ತೇಪೆಗೆಲಸ ಅನಿವಾರ್ಯವಾಗುತ್ತದೆ. ರಸ್ತೆ ಬದಿಯಲ್ಲೇ ಅಂಗಡಿ ಹರಡಿಕೊಂಡು ಕೂತಿರುವ ಸೈಕಲ್ ರಿಪೇರಿಗಾರರು ಅರ್ಧ ಗಂಟೆಯೊಳಗಾಗಿ ತಮಗೆ ಒಪ್ಪಿಸಿದ ತೇಪೆಗೆಲಸ ಮುಗಿಸುತ್ತಾರೆ. ಆದರೆ ಸ್ಕೂಟರ್, ಕಾರುಗಳ ಟೈರ್ ರಿಪೇರಿ ಮಾಡುವ ಪ್ರವೀಣರು ಸಾವಕಾಶವಾಗಿಯೇ ಅವುಗಳನ್ನು ಪರಾಂಬರಿಸುವ ಮನಸ್ಸು ಮಾಡುತ್ತಾರೆ. ಎಷ್ಟು ನಿಧಾನ ಮಾಡಿದರೆ ಅಷ್ಟು ಕಠಿಣ ಕೆಲಸವೆನ್ನುವ ನೆಪ ಹೂಡಿ ಅವರು ಹೆಚ್ಚು ಹಣ ವಸೂಲು ಮಾಡುವ ಹವಣಿಕೆಯಲ್ಲಿರುತ್ತಾರೆ.

ಟೈರುಗಳಿಗೆ ಪದೇಪದೆ ತೇಪೆ ಹಾಕಿಸಿ ಅವುಗಳ ಓಟ ಏರುಪೇರಾಗುವುದಕ್ಕೆ ಮೊದಲೇ ಹೊಸ ಹೊದಿಕೆಯ ಹಳೆಯ ರೀಟ್ರೀಡೆಡ್ ಟೈರುಗಳನ್ನು ಕೊಳ್ಳುವುದು ಉಚಿತ. ಟೈರು ಟ್ಯೂಬುಗಳಲ್ಲದೆ ಕಾರುಗಳ ಇತರ ಅಂಗಗಳಿಗೂ ತೇಪೆ ಕೆಲಸ ಮಾಡಿಸಬೇಕಾಗುತ್ತದೆ. ತೇಪೆ ಹಾಕಿಸಿ ಬಣ್ಣ ಹೊಡೆಸದೆ ಹಾಗೇ ಬಿಟ್ಟರೆ ಕಾರುಗಳು ಪುರಾತನ ಕಾರುಗಳ ಪ್ರದರ್ಶನದಲ್ಲಿ ಪಾಲುಗೊಳ್ಳುವ ಅರ್ಹತೆ ಪಡೆಯಬಹುದು.

ಈಚೆಗೆ ವ್ಯಾಯಾಮಕ್ಕೆ ಹೋಗುವ ಕೆಲವು ವ್ಯಕ್ತಿಗಳು ವಿಶೇಷ ಜಾಗಿಂಗ್ ಪೋಷಾಕುಗಳಲ್ಲಿ ಓಡಾಡುವುದನ್ನು ನಾವು ಕಾಣುತ್ತೇವೆ. ಅವರ ಷರಾಯಿಗಳು ಒಂದೆ ಬಣ್ಣದ್ದಾಗಿರುವುದಿಲ್ಲ. ಕೆಳ ಕಾಲಿನ, ಮೊಳ ಕಾಲಿನ ಸುತ್ತ ಬೇರೆ ಬಣ್ಣದ

ಪಟ್ಟಿಗಳ ತೇಪೆ! ಇಲ್ಲದಿದ್ದರೆ ಷರಾಯಿನ ಉದ್ದಕ್ಕೂ ಒಂದು ಬಿಳಿಯ ಬಣ್ಣದ ಪಟ್ಟಿ, ಸಿದ್ಧಉಡುಪಿನ ವ್ಯಾಪಾರಿಗಳು ಇದನ್ನೊಂದು ನವೀನ ಮಾದರಿಯೆಂದು ಪ್ರಚಾರ ಮಾಡಿ ತಮ್ಮ ದರ್ಜಿಗಳು ಮಿಗಿಸುವ ಕೆಲಸಕ್ಕೆ ಬಾರದ ಬಟ್ಟೆ ತುಂಡುಗಳಿಂದ ಲಾಭ ಸಂಪಾದಿಸುತ್ತಿದ್ದಾರೆ. ಇಲ್ಲಿ ತೇಪೆಗೆಲಸವನ್ನು ವಿಪುಲವಾಗಿ ಉಪಯೋಗಿಸುವ ಜೀನ್ಸ್ ಎಂಬ ಕೊಳವೆ ಷರಾಯಿಯ ಜ್ಞಾಪಕವಾಗುತ್ತದೆ. ಎಷ್ಟೆಷ್ಟು ಮಾಸಿಹೋಗಿ ಎಷ್ಟು ಕಡೆ ಬಣ್ಣಬಣ್ಣದ ತೇಪೆ ಹಾಕಿದೆ ಎನ್ನುವುದನ್ನನುಸರಿಸಿ ಜೀನ್ಸ್‌ಗಳ ಆಧುನಿಕತೆ ಅಷ್ಟಷ್ಟೂ ಹೆಚ್ಚಿನದೆಂದು ನಿರ್ಧಾರವಾಗುತ್ತದೆ. ಮಂಡಿ, ಕೆಳಕಾಲು, ಪೃಷ್ಠಗಳ ಮೇಲೆ ತೇಪೆಯಿಲ್ಲದಿದ್ದರೆ ಅವು ಹಳೆಯಕಾಲದವೆಂದು ಈಗಿನ ಯುವಕ ಯುವತಿಯರು ಮೂದಲಿಸುತ್ತಾರೆ. ಹಾಪ್ವೇ ದಪ್ಪಬಟ್ಟೆಯ ಡೆನಿಮ್ ಷರಟುಗಳಿಗೂ ತೇಪೆ ಅಥವಾ ಅಡ್ಡಪಟ್ಟಿ ಇದ್ದರೆ ಅವುಗಳನ್ನು ಧರಿಸುವವರ ಅಂತಸ್ತು ಹೆಚ್ಚುತ್ತದೆ. ಬಟ್ಟೆಚೂರುಗಳನ್ನು ತೇಪೆ ಹಾಕಲು ಉಪಯೋಗಿಸುತ್ತಲೇ ಬಂದಿರುವ ನಮ್ಮ ತ್ಯಾಪಣ್ಣನಿಗೂ ಒಂದಲ್ಲ ಒಂದುದಿನ ಈ ಕಲೆಯ ಲಾಭಾಂಶದ ಅರಿವಾಗಿ ಅವನೂ ಒಳ್ಳೆಯ ಸಂಪಾದನೆ ಮಾಡಿಯಾನು ಎಂಬ ಭರವಸೆ ನನಗಿದೆ.

ಉಳಿತಾಯದ ಮನೋಪ್ರವೃತ್ತಿಯುಳ್ಳವರು ತಮ್ಮ ಷೂ, ಚಪ್ಪಲಿಗಳಿಗೂ ಬೇರೆ ಬೇರೆ ಬಣ್ಣದ ತೊಗಲಿನ ಇಲ್ಲವೆ ಪ್ಲಾಸ್ಟಿಕ್ಕಿನ ತೇಪೆ ಹಾಕಿಸಿ ಹೊಸಹೊಸ ಫ್ಯಾಷನ್‌ಗಳನ್ನು ಕಲ್ಪಿಸುವ ದಿನ ದೂರವಿರಲಾರದು ಎನ್ನುವುದು ನನ್ನ ಊಹೆ.

ಮನೆಗೋಡೆಗಳ ತೇಪೆಹಾಕುವುದರಲ್ಲಿ ಹೆಚ್ಚು ಕಡಿಮೆ ಹಳೆಯ ಮನೆಬಾಡಿಗೆಗೆ ತೆಗೆದುಕೊಂಡವರೆಲ್ಲ ನುರಿತಿರುತ್ತಾರೆ. ಗೋಡೆಯಲ್ಲಿ ನೀರಿಳಿದು ಪಾಚಿಕಟ್ಟಿದ, ಇಲ್ಲವೆ ಬಿರುಕು ಬಿಟ್ಟ ಭಾಗಗಳೇ ಅಧಿಕವಾಗಿರುವ ಸಂದರ್ಭಗಳಲ್ಲಿ ಇವರ ಚಾತುರ್ಯ ಬೆಳಕಿಗೆ ಬರುತ್ತದೆ. ಆಧುನಿಕ ಯುಗದಲ್ಲಿನ ''ಕೊಲಾಜ್'' ಎಂಬ ತೇಪೆಗಾರಿಕೆಯ ಕಲೆಯನ್ನಾಧರಿಸಿ ಇವರು ಗೋಡೆಯ ಅಂಥ ಭಾಗವನ್ನೆಲ್ಲ ಬಣ್ಣಬಣ್ಣದ ಚಿತ್ರ ಸಹಿತ ಕಾಗದದ ಚೂರುಗಳಿಂದ ಮುಚ್ಚಿ ಚಿತ್ತಾರವಾಗಿ ಕಾಣಿಸುವಂತೆ ಮಾಡಿರುತ್ತಾರೆ. ಕ್ರಮೇಣ ಈ ವಿದ್ಯೆಯನ್ನು ಗೋಡೆ ಚೆನ್ನಾಗಿಯೇ ಇರುವ ಅನುಕೂಲಸ್ಥರ ಮನೆಯವರೂ ಅನುಸರಿಸಿ ತಮ್ಮ ''ಗೊಲಾಜ್'' ಪ್ರಾವೀಣ್ಯವನ್ನು ಪ್ರದರ್ಶಿಸತೊಡಗಿದ್ದಾರೆ. ಗ್ರೂಪ್ ಫೋಟೋಗಳು, ಹಿರಿಯರ ದೊಡ್ಡ ಚೌಕಟ್ಟಿನ ಭಾವಚಿತ್ರಗಳು, ಹಳೆಯ ಕ್ಯಾಲೆಂಡರುಗಳು, ಇವೆಲ್ಲ ಗೋಡೆ ತುಂಬಿದ್ದರೆ ಗೋಡೆಯ ಹುಳುಕುಗಳನ್ನು ಶೃಂಗಾರವಾಗಿಯೇ ಮುಚ್ಚಲು ಸಹಾಯಕವಾಗುತ್ತವೆ. ''ಕೊಲಾಜ್'', ''ಮೊಸೇಯಿಕ್,'' ''ಪಾಸ್ಟಿಷ್'' ಎಂಬೆಲ್ಲ ಹೆಸರಿನ ಕಲಬೆರಕೆಯ ಕಲಾಪ್ರಕಾರಗಳು ಉಗಮವಾದ ರೀತಿಯೇ ಇದು ಎಂದು ನನ್ನ ಭಾವನೆ.

ನಾವು ಹಿಂದೆ ಬಾಡಿಗೆಗಿದ್ದ ಮನೆ ಮಾಲೀಕರು ಮನೆಯ ಇನ್ನೊಂದು ಭಾಗದಲ್ಲೇ ವಾಸವಾಗಿದ್ದರು. ಗೋಡೆಯ ರಿಪೇರಿಯ ಅವಶ್ಯಕತೆಯನ್ನು ನಾವು ಅವರ ಗಮನಕ್ಕೆ ತಂದಾಗಲೆಲ್ಲ ಅವರು ನಮ್ಮನ್ನು ಅವರ ಮನೆಗೆ ಕರೆದು ಹುಳುಕು ಮುಚ್ಚಲು ತಾವು ಮಾಡುತ್ತಿದ್ದ ಹೊಸ ಹೊಸ ಪ್ರಯೋಗಗಳನ್ನು ತೋರಿಸಿ ನಮ್ಮನ್ನು ಹಿಂದಕ್ಕೆ ಕಳಿಸಿಬಿಡುತ್ತಿದ್ದರು. ಅವರು ಮನೆ ರಿಪೇರಿಗಾಗಲಿ ವಿಸ್ತರಣೆಗಾಗಲಿ ಒಂದು ಕಾಸನ್ನೂ ಖರ್ಚು ಮಾಡದೆ ನಾವಿದ್ದಷ್ಟು ದಿನವೂ ಕಾಲ ತಳ್ಳಿದ್ದು ತಮ್ಮ ತೇಪೆಗಾರಿಕೆಯ ಕೌಶಲ್ಯದಿಂದಲೇ. ಅವರು ಹಳೆಯ ತುಕ್ಕು ಹಿಡಿದ ಎಣ್ಣೆ ಡಬ್ಬಿಗಳನ್ನು ಜೋಪಾನ ಮಾಡಿಟ್ಟುಕೊಂಡಿರುತ್ತಿದ್ದು, ನಾವು ತೋರಿಸಿದ ಬಿರುಕುಗಳಿಗೆಲ್ಲ ತೇಪೆ ಹಾಕಲು ಅವುಗಳನ್ನು ತಾವೇ ಕತ್ತರಿಸಿ ಉಪಯೋಗಿಸುತ್ತಿದ್ದರು. ಕೊನೆಗೊಮ್ಮೆ ನಮ್ಮ ಬಚ್ಚಲು ಮನೆಯನ್ನೇ ಇಬ್ಭಾಗ ಮಾಡಿ ತಮ್ಮ ಎಣ್ಣೆ ಡಬ್ಬಗಳನ್ನೇ ಬಳಸಿಕೊಂಡು ತಮ್ಮ ಉಪಯೋಗಕ್ಕಾಗಿ ಬಚ್ಚಲು ಮನೆಯ ಒಂದರ್ಧವನ್ನು (ಆ ವರೆಗೆ ಬಚ್ಚಲು ಮನೆಯೇ ಇಲ್ಲದೆ ಕಾಲ ಕಳೆದವರು) ಆಕ್ರಮಿಸಿಕೊಳ್ಳುವ ಹೊತ್ತಿಗೆ ನಾವು ಇನ್ನು ಆ ಮನೆಯಲ್ಲಿರುವುದು ಕ್ಷೇಮಕರವಲ್ಲವೆಂದು ನಿಶ್ಚಯಿಸಿ ಮನೆ ಖಾಲಿ ಮಾಡಿದ್ದೆವು.

ತೇಪೆಗಾರಿಕೆ ಕೆಲಸದಲ್ಲಿ ಅತಿ ಸೂಕ್ಷ್ಮವಾದ ಇಂದಿನ ಒಂದು, ಎರಡು, ಐದು ರೂಪಾಯಿ ನೋಟುಗಳ ಜೀರ್ಣೋದ್ಧಾರದ ಕೆಲಸವೆಂದು ನನ್ನ ಅಭಿಪ್ರಾಯ. ಹರಿದು ಉದುರಿಹೋಗಲು ಸಿದ್ಧವಾಗಿರುವ ನೋಟುಗಳಿಗೆ ತೇಪೆ ಹಾಕಿ ಅಂಟಿಸಲು ಕಲಿತಿರುವ ಕುಶಾಗ್ರಮತಿಗಳೂ ಬಹಳ ಮಂದಿ ಇದ್ದಾರೆ. ತೇಪೆ ಕೆಲಸಕ್ಕೆ ಇವರು ತೆಳು ಕಾಗದ, ಇಲ್ಲವೆ ಪಾರದರ್ಶಕ ಪ್ಲಾಸ್ಟಿಕ್ ಉಪಯೋಗಿಸುತ್ತಾರೆ. ಇವುಗಳನ್ನು ಚಿಕ್ಕಚಿಕ್ಕದಾಗಿ ಉದ್ದುದ್ದಕ್ಕೆ ಕತ್ತರಿಸಿಕೊಂಡು ಇಂಗ್ಲಿಷ್ ವರ್ಣಮಾಲೆಯ ನಾನಾ ಅಕ್ಷರಗಳ (ವಿಶೇಷವಾಗಿ I, V, X, Y, L, Z) ವಿನ್ಯಾಸದಲ್ಲಿ ನೋಟುಗಳಿಗೆ ಜೋಡಿಸಬಲ್ಲ ಇವರಿಗೆ ಸೆಲೋಟೇಪಿನ ಬಳಕೆಯಲ್ಲಿ ವಿಶೇಷ ತರಬೇತಿ ಬೇಕು. ಅದಿಲ್ಲದಿದ್ದವರು ಈ ಕೆಲಸಕ್ಕೆ ಕೈ ಹಾಕಿದರೆ ಅವರ ಮೈಕೈಗಳಿಗೇ ಟೇಪು ಅಂಟಿಕೊಂಡು ಅವಾಂತರ ಮಾಡುವ ಸಾಧ್ಯತೆಯಿದೆ.

ಚೆನ್ನಾಗಿ ತೇಪೆ ಹಾಕಲು ಕಲಿಯಬಯಸುವವರು ಸುಲಭವಾಗಿ ಅಂಟುವ ಸ್ಟಿಕ್ಕರ್ಸ್ ಉಪಯೋಗ ಮಾಡುತ್ತ ಅಭ್ಯಾಸ ಮಾಡಬೇಕು. (ಇವನ್ನು ಕಾರು, ಪೀಠೋಪಕರಣ, ಗೋಡೆ, ಪುಸ್ತಕಗಳ ಮೇಲೆ ಹಚ್ಚಬಹುದು). ಆಮೇಲೆ ಸುಲಭವಾಗಿ ಅಂಟಿದ ಅಂಚೆಚೀಟಿ, ಅಂಚೆ ಕವರುಗಳನ್ನು ತಾಳ್ಮೆಯಿಂದ ಅಂಟಿಸುವುದನ್ನು ಅಭ್ಯಾಸ ಮಾಡಿದರೆ ಕ್ರಮೇಣ ತೇಪೆಗಾರಿಕೆಯ ಕಲೆಯಲ್ಲಿ ಪಾರಂಗತರಾಗಬಹುದು.



# ಇಂದ್ರ - ಜಾಲ

– ಪ್ರಕಾಶ್

ಇಂದ್ರದೇವ ಚಿಂತಾಕ್ರಾಂತನಾಗಿ ಕೂತಿದ್ದ. ಇತರ ದೇವತೆಗಳು, ಗಂಧರ್ವರು ಇತ್ಯಾದಿಗಳು, ಇಂದ್ರನ ಈ ಮೂಡಿಗೆ ಕಾರಣವೇನು ಎಂದು ತಡಕಾಡಿದರು. ಒಬ್ಬ ಸೀನಿಯರ್ ಕೇಳಬಿಟ್ಟ. ''ಪ್ರಭು, ದೇವತೆಗಳಿಗೇ ದೇವೇಂದ್ರರಾದ ತಮಗೆ ಏಕೆ ಈ ಚಿಂತಾಕ್ರಾಂತ ಮುಖ?' ಇಂದ್ರ ನಸುನಕ್ಕ. 'ಬ್ರಹ್ಮ ಸೃಷ್ಟಿಸಿದ ಬ್ರಹ್ಮಾಂಡದಲ್ಲಿ ಹಾಲೀ ಪರಿಸ್ಥಿತಿ ಏನು? ಸಕಲ ಜೀವಾದಿಗಳೆಲ್ಲ ಸೌಖ್ಯವಾಗಿದ್ದಾರೆಯೇ? ಎಲ್ಲೆಡೆ ಸುಭಿಕ್ಷವಿದೆಯೇ ಎಂಬ ಯೋಚನೆಗಳು ನನ್ನನ್ನು ಕಾಡುತ್ತಿವೆ. ಒಂದು ಕಮಿಟಿಯನ್ನು ನೇಮಿಸಿ, ಎಲ್ಲೆಡೆ ಸರ್ವೆ ಮಾಡಿಸಿ, ಮಾಹಿತಿಯನ್ನು ಪಡೆಯಲು ನಿರ್ಧರಿಸಿದ್ದೇನೆ!' ಮೈನರ್ ದೇವತೆಗಳೆಲ್ಲ 'ಸಾಧು!' ಎಂದು ತಲೆದೂಗಿದರು, ತ್ರಿಲೋಕ - ಸರ್ವೆ ಮಾಡಲು ಮೂರು ಮುಖ್ಯ ಟಾಸ್ಕ್ ಫೋರ್ಸ್‌ಗಳು ಹಾಗೂ ಹದಿನೆಂಟು ಸಬ್-ಕಮಿಟಿಗಳು ಸಿದ್ಧವಾದವು. 'ನಿಮ್ಮ ಪ್ರಿಲಿಮಿನರಿ ರಿಪೋರ್ಟ್‌ಗಳನ್ನು ಆದಷ್ಟು ಬೇಗ ನಮ್ಮ ಸಮ್ಮುಖಕ್ಕೆ ತರಬೇಕು' ಎಂಬ ಸರ್ಕುಲರ್ ಹೊರಬಿತ್ತು. ಸದಸ್ಯರೆಲ್ಲ, ಮನೋವೇಗಕ್ಕೂ ಮಿಗಿಲಾಗಿ ಸಾಗುವ ಇನಿವಿಸಿಬಲ್ ರಥಗಳಲ್ಲಿ ಹೊರಟರು.

ಚಾರುದತ್ತನೆಂಬ ಹಿರಿಯ ದೇವತೆಗೆ (ಈತ ಇಂದ್ರನ ನೆಂಟ ಎಂಬುದು ಇಲ್ಲಿ ಅಪ್ರಸ್ತುತ) ಮಿಲ್ಕೀವೇ ಎಂಬ ನಕ್ಷತ್ರರಾಶಿಯನ್ನು ಇನ್ಸ್‌ಪೆಕ್ಟ್ ಮಾಡುವ ಭಾಗ್ಯ ದೊರೆಯಿತು. ಈ ಸಮೂಹದಲ್ಲಿಯೇ ನಾವೆಲ್ಲ ಕರ್ಮ ಸವೆಸುತ್ತಿರುವ ಭೂಮಂಡಲವೂ ಅವನ ದಿವ್ಯ ಚಕ್ಷುಗಳಿಗೆ ಗೋಚರಿಸಿತು. ಭೂಮಂಡಲದ ಸನಿಹಕ್ಕೆ ಬಂದು ಕೂಲಂಕುಷವಾಗಿ ನೋಡಿದ ಈ ಸಮಿತಿಯ ಸದಸ್ಯರೆಲ್ಲ ಭಯಾಶ್ಚರ್ಯಗಳಿಂದ ವಿಹ್ವಲರಾದರು! ''ಈ ಭೂಮಿಯಲ್ಲಿ ವಾಸಿಸುತ್ತಿರುವ ಜನ ಸಮೂಹ ಬಹಳ ಕುತೂಹಲಕಾರಿಯಾಗಿ ನಡದುಕೊಳ್ಳುತ್ತಿದ್ದಾರೆ! ಏಕೆ ಎಂಬುದು ನಮಗಾರಿಗೂ ಅರ್ಥವಾಗುತ್ತಿರಲಿಲ್ಲ. ಅಸಂಖ್ಯಾತ ಜನರು ಈ ಪೆಕ್ಯೂಲಿಯರ್ ನಡತೆಯನ್ನು ಅನುಸರಿಸುತ್ತಿರೋದು ಏಕೆ ಅಂತ ಅರ್ಥಮಾಡಿಕೊಳ್ಳಲು ಬೇಹುಗಾರರನ್ನ ಕಳಿಸಲು ಯೋಚಿಸುತ್ತಿದ್ದೇವೆ'' ಅಂತ ಸಮಿತಿಯ ಮುಖ್ಯಸ್ಥ ಯೋಚಿಸಿದ.

★★★

ನಾನು ಭಾನುವಾರ ಬೆಳಿಗ್ಗೆ ಪೆರೇಡ್ಸ್ ಕೆಫೆಯಲ್ಲಿ ಕಾಫಿ ಕುಡಿಯುತ್ತ ಕುಳಿತಿದ್ದೆ. ಇದು ಬಹು ವರ್ಷಗಳಿಂದ ಅನೂಚಾನವಾಗಿ ನಡೆದು ಬಂದಿರುವ

ಪದ್ಧತಿ. ಏಕಾಂತದಲ್ಲಿ, ಕಾಫಿ ಹೀರುತ್ತ, ಹಿಚ್‌ಕಾಕ್ ಕಥೆಗಳನ್ನು ಓದುವಾಗ ಬಹು ಆನಂದ! ಇದ್ದಕ್ಕಿದ್ದಂತೆ, ಒಬ್ಬ ಅಪರಿಚಿತ ಬಂದು, ನನ್ನ ಟೇಬಲ್ ಹತ್ತಿರ ನಿಂತ. ಇಲ್ಲಿ ಕುಳಿತುಕೊಳ್ಳಬಹುದೇ ಎಂದು ಕೇಳಿದ. ಇದು ಪೆರೇಡ್ ಕೆಫೆಯಲ್ಲಿ ನಭೋತೋ ನಭವಿಷ್ಯತಿ! ಆದರೂ ನನ್ನ ಸಂಸ್ಕೃತಿಗೆ ತಲೆಬಾಗಿ, 'ಓಹೋ, ಬನ್ನಿ' ಎಂದೆ, ಅವನೂ ಕಾಫಿ ಆರ್ಡರ್ ಮಾಡಿದ. 'ಸಂಜೆ ಮಳೆ ಬರುವ ಹಾಗಿದೆ!' ಎಂದೆ. ಅವನು 'ಇಲ್ಲಿ ಬರುಲ್ಲ' ಎಂದ. ನಾನು 'ನೀವು ಮಿಟೀರಿಯಾಲಜಿ ಇಲಾಖೆಯವರೋ?! ಅಂತ ನಕ್ಕೆ. ಅವನು 'ಇಲ್ಲ! ನಾನೊಬ್ಬ ಗಂಧರ್ವ! ಎಂದ. ನಾನು ಚಕಿತನಾದೆ. ಇದೇನು ಬೆಳಗ್ಗೇನೇ ಇವನು ಏನೇನೋ ಕುಡಿದವನ ತರಹ ಆಡ್ತಾನಲ್ಲ ಅಂದುಕೊಂಡೆ! ಅವನು ನಗುತ್ತ, ''ಇಲ್ಲಿ, ನಾನು ಸುರಾಪಾನ ಮಾಡಿಲ್ಲ!' ಅಂದ. ನಾನು ಚಂಗನೆ ಎಗರಿ ಬಿದ್ದೆ. ''ಈಗಲಾದರೂ ನಾನು ಗಂಧರ್ವ ಎದು ನಂಬು! ನಾನು ಇಲ್ಲಿಗೆ ಬಂದಿರೋದು, ಇಂದ್ರನ ಅಪ್ಪಣೆಯ ದೆಸೆಯಿಂದ. ಈ ಲೋಕದ ಜನರೆಲ್ಲ ಸಾಲಾಗಿ ಕುಳಿತು, ಒಂದು ತರಹ ರಿಲಿಜಿಯಸ್ ಬಿಹೇವಿಯರ್ ತೋರಿಸುತ್ತಿದ್ದಾರೆ. ಒಂದು ಪೆಟ್ಟಿಗೆಯ ಮುಂದೆ ಸದಾ ಕೂತು, ಬಲಗೈ ಬೆರಳುಗಳನ್ನಾಡಿಸುತ್ತ ತದೇಕಚಿತ್ತದಿಂದ ಕೂತಿದ್ದಾರೆ. ಮಧ್ಯೆ, ಕೆಲವೇ ಕ್ಷಣ ಅನ್ನ-ಪಾನಗಳಿಗೆ ಉಪಯೋಗಿಸಿ, ಮತ್ತೆ ಪೆಟ್ಟಿಗೆ - ಸ್ಕ್ರೀನಿಗೆ ಮರಳುತ್ತಾರೆ. ಒಂದೇ ಕಟ್ಟಡದಲ್ಲಿ ಇರುವ ಇಬ್ಬರು, ಮಾತನಾಡುವುದನ್ನೇ ಮರೆತಿದ್ದಾರೆ; ಈ ಉಪಕರಣವೇ ಅವರ ಜೀವಾಳ ಎಂಬಂತೆ ಇದ್ದಾರೆ. ಕೈಯನ್ನು ಬರೆಯಲು ಉಪಯೋಗಿಸುವ ವಿದ್ಯೆ ಎಂದೋ ನಾಶವಾಗಿದೆ! ಇವೆಲ್ಲದರ ಮರ್ಮವನ್ನ ನೀನು ನನಗೆ ಹೇಳಬೇಕು! ನನ್ನ ರಿಪೋರ್ಟನ ಇಂದ್ರನಿಗೆ ಕೊಟ್ಟ ಕೂಡಲೇ ನನ್ನ ಕರ್ತವ್ಯ ಮುಗಿಯುತ್ತೆ!' ಅಂದ. ನನಗೆ ಕೋಟಿ ಕೆ.ಬಿ.ಸಿ. ರೂಪಾಯಿ ಗೆದ್ದ ಹಾಗೆ ಭಾಸವಾಯಿತು. ಅವನ ಕೈ ಕುಲುಕಿದೆ.

ಎರಡೇ ದಿನದಲ್ಲಿ (ನಮ್ಮ ಕಾಲಮಾನದಲ್ಲಿ) ಚಾರುದತ್ತನಿಗೆ ನಾಲ್ಕೈದು ಸಾಫ್ಟ್‌ವೇರ್ ಕಂಪೆನಿಗಳ ಟೂರ್ ಮಾಡಿಸಿದೆ. ಅಮರಿಕದ ವೆಬ್‌ಸೈಟುಗಳನ್ನು ನೋಡಿ ಚಕಿತನಾದ. ಬಿಲ್‌ಗೇಟ್ಸ್ ಕಥೆ ಕೇಳಿ ಆಶ್ಚರ್ಯಪಟ್ಟ. ಈ ಪ್ರಚಂಡ ಇನ್ನು ಮುಂದೆ ಏನೇನು ದುರಂತಗಳನ್ನ ಪ್ಲಾನ್ ಮಾಡ್ತಿದಾನೋ ಅಂತ ಚಿಂತಾಕ್ರಾಂತನಾದ. ಒಂದೇ ನಿಮಿಷದಲ್ಲಿ ಅವನ ರಿಪೋರ್ಟ್ ತಯಾರಾಯಿತು. ಅದು ಸಂಸ್ಕೃತದಲ್ಲಿ ಇದ್ದುದರಿಂದ ನನಗೆ ಅರ್ಥವಾಗಲಿಲ್ಲ. 'ವಿ ವಿಲ್ ಮೀಟ್ ಎಗೇನ್!' ಎಂದು ಅಂತರ್ಧಾನನಾದ!

★★★

ರಿಪೋರ್ಟುಗಳನ್ನು ಓದಿ ಇಂದ್ರದೇವ ಬಹಳ ಕುಪಿತನಾದ. "ಭೂಮಂಡಲದ ಜನರೆಲ್ಲ ಅಯೋಗ್ಯರು! ಆಗಸದ ಕಡೆ, ನಮ್ಮ ಕಡೆ ತಲೆಯೆತ್ತಲೂ ಕಾಲವಿಲ್ಲದೆ ಈ ಕಂಪ್ಯೂಟರ್‌ಗಳ ಗುಲಾಮರಾಗಿದ್ದಾರೆ. ಸಕಲ ಭೂಮಂಡಲದಲ್ಲಿಯೂ ಇರುವ ಕಂಪ್ಯೂಟರ್‌ಗಳನ್ನೆಲ್ಲ ನಿರ್ನಾಮ ಮಾಡಿಬಿಡುತ್ತೇನೆ!" ಎಂದು ನಿಂತ. ಚಾರುದತ್ತನೇ ಮೊದಲಾಗಿ, ಹಲವಾರು ದೇವತೆಗಳು "ಪ್ರಭೂ, ಈ ಕೋಪ ಬೇಡ. ಫೈನಲ್ ನಿರ್ಧಾರಕ್ಕೆ ಮೊದಲು ವಿಷ್ಣು, ಈಶ್ವರರನ್ನೂ ಕರೆಸಿ ಅವರ ಸಲಹೆ ಕೇಳಿ" ಎಂದರು. ಇಂದ್ರ, ವಿಷ್ಣು, ಈಶ್ವರರು ಸಮಿಟ್ ಸಭೆ ನಡೆಸಿದರು. ಕಡೆಗೆ ಕಂಪ್ಯೂಟರ್‌ಗಳನ್ನೆಲ್ಲ ನಿರ್ನಾಮ ಮಾಡಲು ನಿರ್ಧರಿಸಲಾಯಿತು. ಈಶ್ವರ ತನ್ನ ಹಣೆಗಣ್ಣನ್ನು ಭೂಮಂಡಲದ ಕಡೆ ಫೋಕಸ್ಸಿದ. ಎರಡೇ ಕ್ಷಣದಲ್ಲಿ ಜಗತ್ತಿನಾದ್ಯಂತ ಕಂಪ್ಯೂಟರ್‌ಗಳೆಲ್ಲ ಮಡಿದವು!

ಸ್ವರ್ಗದಲ್ಲೆಲ್ಲ ಇದ್ದಕ್ಕಿದ್ದಂತೆ ಗಾಢಾಂಧಕಾರ! ಗಂಧರ್ವರೆಲ್ಲ ನಡುಗಿದರು. ದಿವ್ಯ ಚಕ್ಷುಗಳೆಲ್ಲ 6/6 ದೃಷ್ಟಿಗಿಂತ ಮಂದವಾದವು! ಹಾರಾಡುತ್ತಿದ್ದ ರಥಗಳೆಲ್ಲ ಗ್ರಾವಿಟಿ ಎಲ್ಲಿ ಎಂದು ಹುಡುಕಲಾರಂಭಿಸಿದವು!

★★★

ಗಾಢ ನಿದ್ರೆಯಲ್ಲಿ ಸುಖಃ ಸ್ವಪ್ನ ಕಾಣುತ್ತಿದ್ದ ಬಹ್ಮ ದೇವನನ್ನ ದೇವತೆಗಳು ಎಚ್ಚರಿಸಿದರು. 'ನನ್ನ ಸುಖ ನಿದ್ರೆಯನ್ನು ಏಕೆ ಭಗ್ನಗೊಳಿಸಿದ್ದೀರಿ?' ಎಂದು ಬ್ರಹ್ಮದೇವ ಕೇಳಿದ. "ಕಲಿಗಾಲ ಮುಕ್ತಾಯವಾಯಿತು ಪ್ರಭು, ತಮ್ಮ ಡ್ಯೂಟಿ ಮತ್ತೆ ಆರಂಭವಾಗಬೇಕಾಗಿದೆ" ಎಂದು ದೇವತೆಗಳು ಬಿನ್ನವಿಸಿದರು!

★★★

ಸ್ಪೀಟಿಲ್ಲದ
ಒಂದೇ ಜಾಮು
ಟ್ರಾಫಿಕ್ ಜಾಮು

- ಎನ್. ಪ್ರಕಾಶ್

# ಪರೋಪಕಾರಿ

ಡಾ|| ಜ್ಯೋತ್ಸ್ನಾ ಕಾಮತ್

ಕ್ವಚಿತ್ತಾಗಿ ರಾಗವೆಳೆಯುವ ಕರೆಗಂಟೆ, ಜೋರಾಗಿ ಕಿರುಚಿಕೊಂಡಾಗ ಸಿಟ್ಟು ಬಂದಿತ್ತು. ವರದಕ್ಷಿಣೆಯ ಕಿರುಕುಳದಿಂದ ಮೂವರು ಯುವ ಪತ್ನಿಯರು ಆತ್ಮಹತ್ಯೆ ಮಾಡಿಕೊಂಡ ಸಮಾಚಾರ ಓದಿ ಮನಸ್ಸು ವ್ಯಗ್ರಗೊಂಡಿತ್ತು. 'ಯಾರು ಬೇಕು?' ಎಂದು ಕಹಿಯಾಗಿಯೇ ಕೇಳಿದೆ, ಯಾರೋ ತಪ್ಪು ನಂಬರಿನ ಮನೆಯ ಗುಂಡಿ ಒತ್ತಿರಬಹುದು, ಎಂದು ಊಹಿಸಿ, ಯಾರೋ ಸುಶಿಕ್ಷತ ವ್ಯಕ್ತಿ, ನಮಸ್ಕರಿಸಿ, ಡಾ|| ಕೃಷ್ಣಾನಂದ ಕಾಮತರ ಮನೆ ಇದೇನಾ?'' ಎಂದು ಸಭ್ಯತೆಯಿಂದ ವಿಚಾರಿಸಿತು. ಬಾಗಿಲು ಪೂರ್ಣ ತೆಗೆದು ಧ್ವನಿ ತಗ್ಗಿಸಿ, ನೀವು ಯಾರು? ಎಂದು ಕೇಳಿದೆ. ನಾನು ಪ್ರೊ|| ಸುಬ್ರಹ್ಮಣ್ಯ. ಕುಟಜಾದ್ರಿ ವಿಶ್ವವಿದ್ಯಾಲಯದಲ್ಲಿ ಅಧ್ಯಾಪಕ. ನನ್ನ ಸಂಶೋಧನಾ ಮಾರ್ಗದರ್ಶಿ, ಪ್ರೊ. ಇಷ್ಟಸಿದ್ಧಿಯವರು, ''ಕೃಷ್ಣಾನಂದ ಕಾಮತರು ಬಹುಮುಖ ಪ್ರತಿಭೆಯ ವ್ಯಕ್ತಿ. ಆದರೆ ಯಾರೂ ಅವರನ್ನು ನೋಡಿಲ್ಲ! ಅರಿತಿಲ್ಲ! ಅವರನ್ನು ಅಭ್ಯಸಿಸಿ ಮಹಾ ಪ್ರಬಂಧ ಬರೆದರೆ ನಿಮಗೆ ಪಿ.ಹೆಚ್.ಡಿ. ಡಿಗ್ರಿ ಜೊತೆಗೆ ಸಕಲರಿಂದ ಮಾನ್ಯತೆ ನಿಶ್ಚಿತವಾಗಿ ಸಿಗುತ್ತದೆ'' ಎಂದು ಅವರೇ ಹೆಸರು, ಖಾಯಂ ವಿಳಾಸ ಹುಡುಕಿ ಕೊಟ್ಟು, ಪರಿಚಯ ಪತ್ರವನ್ನೂ ಕಳಿಸಿದ್ದಾರೆ! ಎಂದು ಅಲ್ಪ ಪರಿಚಯ ನೀಡಿದವರನ್ನು ಬರಮಾಡಿಕೊಂಡು, ವಿರಮಿಸಲು ಹೇಳಿ ಕಾಫಿ- ಕುರುಕಲು ತಿಂಡಿ ತಂದಿಟ್ಟೆ. ಗೆಲುವಾದರು.

ರಾಯರನ್ನು ತಾವಾಗಿ ಹುಡುಕಿಕೊಂಡು ಬಂದು ಶೋಧ - ಸಂಶೋಧನೆಗೆ ಒಳಪಡಿಸಬಯಸುವವರ ಅತ್ಯಪೂರ್ವರ, ಮುಂದೆ ಸುಮ್ಮನಿರಲಿಕ್ಕುಂಟೆ? ಅವರ ಮೂಲಕ ಪರಿಚಯ ಕೊಡಲು ಪ್ರಾರಂಭಿಸಿದೆ. ''ನಾನು ಡಾ|| ಕಾಮತರ ಧರ್ಮಪತ್ನಿ. ನನ್ನವರು ತೀರ ವಿಕ್ಷಿಪ್ತ ವ್ಯಕ್ತಿ! ಅವರನ್ನು ಕಾಣಬಯಸುವವರನ್ನು ನಾನಿನ್ನೂ ಕಂಡಿಲ್ಲ. ಅವರು ''ಪ್ರಸಿದ್ಧ ಪರಾಙ್ಮುಖಿ' ಎಂಬ ಬಿರುದು ಪಡೆದು ಮೂರು ದಶಕಗಳೇ ಕಳೆದಿವೆ! ನೀವು ನೋಡಬೇಕಾದ ವ್ಯಕ್ತಿ ಸುಪ್ರಸಿದ್ಧ ಡಾ|| ಸೂರ್ಯನಾಥ ಕಾಮತರು ಅಲ್ಲವಷ್ಟೇ?'' ಎಂದು ಸಂದೇಹ - ಸೂಚಕವಾಗಿ ಕೇಳಿದಾಗ, ಬಂದವರು ಗಾಬರಿಯಾಗಿ, ಬ್ರೀಫ್‌ಕೇಸ್‌ದಿಂದ ಕಾಗದ - ಪತ್ರಗಳನ್ನು ಹೊರಗೆಳೆದು, ಇನ್ನೊಮ್ಮೆ ಸರಿಯಾಗಿ ನೋಡಿ, ''ಹೆಸರು - ವಿಳಾಸ ಸರಿಯಾಗಿಯೇ ಇವೆ, ಮ್ಯಾಡಂ! ಅಲ್ಲದೇ ದಾರಿ ಹೋಕ ಪುಣ್ಯಾತ್ಮರು ಒಬ್ಬರು

ಜೊತೆಗೆ ಬಂದು ನಿಮ್ಮ ಫ್ಲ್ಯಾಟನ್ನು ತೋರಿಸುವ ಔದಾರ್ಯ ತೋರಿಸಿದ್ದಾರೆ! ಬೆಂಗಳೂರಿನ ಜನ, ಸರಿಯಾಗಿ ಮಾರ್ಗದರ್ಶನ ಮಾಡುವುದಿಲ್ಲ. ಗೊತ್ತಿಲ್ಲವೆಂದು ಪ್ರಾಮಾಣಿಕವಾಗಿರದೇ ತಪ್ಪಾಗಿ ಸೂಚನೆಯಿತ್ತು, ಮನೆ-ಮನೆ, ಬೀದಿ-ಬೀದಿ ಅಲೆಯುವಂತೆ ಮಾಡುತ್ತಾರೆ! ಎಂದು ಸಹೋದ್ಯೋಗಿ ಒಬ್ಬರು ಎಚ್ಚರಿಸಿಯೇ ಇದ್ದರು. ನಿಮ್ಮ ಮಲ್ಲೇಶ್ವರದವರು ಇದಕ್ಕೆ ಅಪವಾದ ಇದ್ದಿರಬೇಕು! ಅಲ್ಲವೇ ದಾರಿಯುದ್ದಕ್ಕೂ ಆ ಅಪರಿಚಿತರು, ನಾನು ಕೇಳುತ್ತಿದ್ದ ಪ್ರಶ್ನೆಗಳಿಗೆಲ್ಲ ಬೇಸರಿಸದೇ ವಿನೋದವಾಗಿ, ಮಾರ್ಮಿಕವಾಗಿ ಉತ್ತರಿಸುತ್ತ ಬಂದರು. ಕೃತಜ್ಞತೆ ಸೂಚಿಸಿ, ಪಕ್ಕದ ಹೋಟೆಲಿನಲ್ಲಿ ಕಾಫಿ ಕುಡಿಯೋಣವೆಂದರೆ ಒಪ್ಪದೇ ಹಾಗೇ ಹೊರಟುಬಿಟ್ಟರು.... ಅವರು ಹಾಗೆ ನಡೆದುಕೊಂಡದ್ದರಿಂದ ನಿಮ್ಮ ಕೈಯ ಸೊಗಸಾದ ಕಾಫಿ ಕುಡಿಯುವ ಭಾಗ್ಯ ನನ್ನದಾಯ್ತು!'' ಬರಿದಾದ ಲೋಟ ಕೆಳಗಿಟ್ಟರು.

ನೀವು, ಧರ್ಮಪತ್ನಿಯಾಗಿ ಅವರನ್ನು ಹೇಗೆ ಮಾಪನ ಮಾಡುತ್ತೀರಿ? ಆಗಂತುಕರು ನೋಟ್‌ಬುಕ್, ಪೆನ್ ಹಿಡಿದು ಕೆಲಸ ಆರಂಭಿಸಿಯೇ ಬಿಟ್ಟರು. ''ಮಾಪನವೇ? ನಮ್ಮ ವಿವಾಹದ ಮೂವತ್ತೈದು ವರ್ಷಗಳು ಕಳೆದರೂ ಅವರನ್ನು ಸರಿಯಾಗಿ ಅರ್ಥಮಾಡಿಕೊಳ್ಳಲು ಆಗಿಲ್ಲ! ಮಾಪನ ಎಲ್ಲಿಂದ ಬಂತು? ಅವರು ಮಿತಭಾಷಿ. ಆದರೆ ಚುಟುಕಾಗಿಯೇ ಗಂಭೀರ ವಿಚಾರ ಹೇಳುತ್ತಾರೆ. ವಿವಾಹದ ಅನುಭವಗಳ ಬಗ್ಗೆ ಸಹೋದ್ಯೋಗಿಗಳು ಹೊಸದರಲ್ಲಿ ವಿಚಾರಿಸಿದಾಗ, ವಿವಾಹಕ್ಕೆ ಮೊದಲು ಪ್ರಯೋಗಾಲಯ ಹೊಕ್ಕರೆ ಮನೆಗೆ ಹೋಗಲು ಮರೆಯುತ್ತಿದ್ದೆ. ಈಗ ಪತ್ನಿಯನ್ನು ಬಿಟ್ಟು ಕಾಲೇಜಿಗೆ ಹೋಗಲು ಮರೆಯುತ್ತಿದ್ದೇನೆ!' ಎಂದು ಗಂಭೀರವಾಗಿಯೇ ಹೇಳಿದರು. ಆದರೆ ಒಳ್ಳೆಯ ಶಿಕ್ಷಕರು, ಸಂಶೋಧಕರು ಎಂದು ಗುರುತಿಸಲ್ಪಟ್ಟದ್ದರಿಂದ ಯಾರೂ ಅವರ ಮಾತು ನಂಬಲಿಲ್ಲ'' ನಾನೆಂದೆ.

ಆಗಂತುಕರು, ತಾನಿನ್ನೂ ಮಲ್ಲೇಶ್ವರದ ಈ ಮನೆಯ ಶೋಧದಲ್ಲಿ ಯಶಸ್ವಿಯಾದ ಗುಂಗಿನಲ್ಲೇ ಇದ್ದರು. ''ಒಳ್ಳೆ ಜನ ಇದ್ದುದರಿಂದಲೇ ಈ ಜಗತ್ತು ನಡೆದಿದೆ, ನೋಡಿ! ಬೆಂಗಳೂರಿಗೆ ಹೊಸಬ. ಯಾರೋ ಮಲ್ಲೇಶ್ವರಕ್ಕೆ ಹೋಗುವ ಬಸ್ ಹತ್ತಿಸಿದರು. ಆದರೆ ನನಗೆ ಬೇಕಾದ ವಿಳಾಸ ಓದಿನೋಡಿ, ವಿವರಿಸಲು ಯಾರಿಗೂ ಬಿಡುವೇ ಇಲ್ಲ. ಕೇಳಿದವರು, ಕೈಚಲ್ಲಿ ಹಾದಿ ಹಿಡಿಯುತ್ತಿದ್ದರು. ಕೊನೆಗೊಬ್ಬ ಹಿರಿಯರು ಭುಜಗಳಿಗೆ, ಎರಡೂ ಕೈಗಳಿಗೆ ಚೀಲಗಳನ್ನು ತಗಲಿಸಿ ಇರುವೆ ವೇಗದಲ್ಲಿ ಇದುರಾದರು. ಅನುಮಾನಿಸುತ್ತಲೇ ವಿಚಾರಿಸಿದೆ. ''ಬನ್ನಿ ಯೋಚಿಸಬೇಡಿ, ಇಲ್ಲಿಯವರೆಗೆ ಯಾರಿಗಾದರೂ ಇವರ

ಪರಿಚಯ ಇದೆಯೇ? ಎಂದು ಕೇಳಿ ನೋಡೋಣ' ಎಂದು ನನ್ನೊಂದಿಗೇ ಎಂದರು. ಒಂದೆರಡು ಚೀಲ ನನ್ನ ಕೈಗೆ ಕೊಡಿ ಎಂದರೂ ಕೇಳದೇ ಇವೆಲ್ಲವನ್ನೂ ಹೊತ್ತಾಗಲೇ ವಾಕ್ ಮಾಡಿದ ಸುಖ ನನ್ನದಾಗುತ್ತದೆ! ಎಂದು ನಕ್ಕರು. ಗಿರಾಕಿಗಳಿಂದ ತುಂಬಿದ ಪಕ್ಕದ ಹೋಟೆಲಿನಲ್ಲಿ ವಿಚಾರಿಸಿದರು. ''ಇಂಥ ವ್ಯಕ್ತಿಯ ಅಸ್ತಿತ್ವ ತಮಗೆ ಗೊತ್ತಿಲ್ಲವೆಂದು ಮಾಲಿಕರು ಹೇಳಿ ಹಣ ಎಣಿಸಲಾರಂಭಿಸಿದರು. ಅಲ್ಲಿಯ ಚಿಕ್ಕ ಅಂಗಡಿಯವರು, ಕಾಫಿ ಕುಡಿಯುತ್ತಿದ್ದವರು, ವಡಾ ನುಂಗುತ್ತಿದ್ದವರೂ ಕೈ ಚೆಲ್ಲಿದರು. ಧೋಬಿಗಳಿಗೆ ಗೊತ್ತಿರುತ್ತದೆ! ಎಂದು ಅವನಂಗಡಿಯಲ್ಲಿ ವಿಚಾರಿಸಿದಾಗ ಇಂಥವರ ಬಟ್ಟೆ ತಂದು ಕೊಟ್ಟಿಲ್ಲವೆಂದರು. ನರ್ಸಿಂಗ್ ಹೋಂನಲ್ಲಿ ವಿಚಾರಿಸಿದಾಗ - ಈ ಏರಿಯಾದ ಡಾಕ್ಟರರೆಲ್ಲರ ಪರಿಚಯವಿದೆ. ಈತನೆಂಥ ಡಾಕ್ಟರ್! ಎಂದು ಮುಖ ಕಿವುಚಿದರು. ಬ್ಯಾಂಕ್‌ದಲ್ಲಿ ವಿಚಾರಿಸಿದರು, ಪೋಲಿಸರಿಗೆ ವಿಚಾರಿಸೋಣವೆಂದರು. ನಾನೇ ಬೇಡವೆಂದೆ. ಕೊನೆಗೆ ಆ ಯಜಮಾನರು ''ಈ ಫ್ಲ್ಯಾಟ್ ಇರುವ ಕಟ್ಟಡ ತೋರಿಸುತ್ತೇನೆ. ಬಾಗಿಲಲ್ಲಿ ಕಾವಲುಗಾರ ಇದ್ದೇ ಇರುತ್ತಾನೆ. ಅವನು ಮನೆಯನ್ನು ತೋರಿಸಿಕೊಡುತ್ತಾನೆ' ಎಂದು ಇಲ್ಲಿಯವರೆಗೆ ಬಂದು ಮುಟ್ಟಿಸಿ, ತಮ್ಮ ಕೆಲಸಕ್ಕೆ ಹೊರಟು ಹೋದರು ನಿಮ್ಮ ದರವಾನನು ಕಾಮತರೆಂದೊಡನೆ ಶಿವಮೊಗ್ಗೆಯ 'ಕೃಷ್ಣಾಮೋಟರ್ಸ್' ಕಾಮತರ ಮನೆಗೆ ಕರೆದೊಯ್ಯಬೇಕೇ? ಪುಣ್ಯಕ್ಕೆ ಆ ಮನೆಯವರು, ಕೃಷ್ಣಾನಂದ ಕಾಮತರ ಪರಿಚಯ ಇದೆಯೆಂದು ಈ ಮನೆ ತೋರಿಸಿದರು'' ಆಗಂತುಕರೆಂದರು. ''ಕಾಮತರ ಮೌಲ್ಯಮಾಪನಕ್ಕೆ ಸಹಾಯವಾಗುವ ಒಂದೆರಡು ವಿಚಾರ ಹೇಳುತ್ತೀರಾ?''

''ಮೌಲ್ಯಮಾಪನವೇ? ಸರಿ! ಸರಿ. ಹಣವನ್ನು ಎಣಿಸುವದರಲ್ಲಿ ತುಂಬಾ ಜಾಗ್ರತೆ ವಹಿಸುತ್ತಾರೆ! ಹಿರಿಕಿರಿರೆಂದು ಭೇದ ಮಾಡದೇ ಒಂದು, ಎರಡು, ಐದು ರೂಪಾಯಿ ಮೌಲ್ಯದ ನೋಟುಗಳ ಘೋರ ಅಭಾವ ಕಂಡುಬಂದಾಗ ಅವರು ತೋರಿದ ಸಾಮಾಜಿಕ ಪ್ರಜ್ಞೆ ನನ್ನನ್ನು ದಿಙ್ಮೂಢಗೊಳಿಸಿದೆ! ಹಣ್ಣು ಹಂಪಲು, ತರಕಾರಿ ಮಾರುವವರೆಲ್ಲ ತಮ್ಮ ಹತ್ತಿರ ಕೂಡಿಬಿದ್ದ ಚಿಲ್ರೆ ನೋಟುಗಳನ್ನು ಇವರಿಗೆ ಹಾಕುತ್ತಾರೆ. ಅತೀ ಕಳಪೆ ನೋಟುಗಳನ್ನು ಪಡೆದು ಇವರು ಹೊಸ ಹೊಸ ನೋಟುಗಳ ವಿತರಣೆ ಪ್ರಾರಂಭಿಸಿದರು... ಎನ್ನುತ್ತಿದ್ದಂತೆ, ಟಿಪ್ಪಣೆ ಮಾಡಿಕೊಳ್ಳುವುದನ್ನು ನಿಲ್ಲಿಸಿ. ''ಸರಕಾರವೇ ಕಿರಿ ಮೌಲ್ಯದ ನೋಟುಗಳ ಮುದ್ರಣ ನಿಲ್ಲಿಸಿದಾಗ ಕಾಮತರ ಹತ್ತಿರ ಹೊಸ ನೋಟುಗಳು ಹೇಗೆ ಬಂದವು?' ಅರ್ಧ ವಿಸ್ಮಯ, ಅರ್ಧ ಸಂದೇಹದ ಪ್ರಶ್ನೆಯನ್ನು ಕೇಳಿದರು ಸಂಶೋಧಕರು.

‘‘ಇವರ ಆಪ್ತರೆಲ್ಲ ವಿವಿಧ ಬ್ಯಾಂಕ್‌ಗಳಲ್ಲಿ ಅಧಿಕಾರಿಗಳಾಗಿದ್ದಾರೆ. ಹಿಂದೊಮ್ಮೆ ಹೊಸ ಹೊಸ ನೋಟುಗಳು ಸಿಗುತ್ತಿದ್ದ ದಿನಗಳಲ್ಲಿ, ಮನೆಯಲ್ಲಿ ದಾಸ್ತಾನಾದ ಕಿರಿ ಬೆಲೆಯ ನೋಟುಗಳನ್ನು ಇವರಿಗೆ ಹಸ್ತಾಂತರಿಸಿ ಬಡ್ಡಿಯನ್ನು ಪ್ರತಿ ತಿಂಗಳು ಕಳೆದುಕೊಳ್ಳಬೇಕೇ? ಎಂದು ಲೆಕ್ಕಾಚಾರ ಹಾಕಿದ್ದರು. ರಾಯರು ಬಡ್ಡಿಯ ಬಗ್ಗೆ ತಲೆ ಕೆಡಿಸಿಕೊಳ್ಳುವವರಲ್ಲ. ಬಂದ ನೋಟುಗಳನ್ನು ತಮ್ಮ ಮನೆ ಖಜಾನೆಗೆ ಸೇರಿಸಿ, ಒಂದು ದಶಕಕ್ಕೂ ಮೀರಿದ ಅವಧಿಯಲ್ಲಿ ಆ ಬಗ್ಗೆ ಮರೆತೇ ಬಿಟ್ಟಿದ್ದರು. ಈಗ ಅವುಗಳ ಸಮರ್ಪಕ ವಿತರಣೆಯಾಯಿತೆಂದು ಅಭಿಮಾನ ಪಡುತ್ತಿದ್ದಾರೆ’’ ನಾನೆಂದೆ.

‘ಹರಿದ ನೋಟುಗಳ ದಾಸ್ತಾನು ಏನು ಮಾಡಿದರು?’

ಅವನ್ನು ಪೆಟ್ಟಿಗೆಗೆ ಸೇರಿಸುವ ಜಾಯಮಾನದವರಲ್ಲ ಕಣ್ರೀ! ಸೋಪ್ ನೀರು ಅಥವಾ ಎಸಿಟೋನ್ ಹಾಕಿ ತೊಳೆದು, ಹರಿದ ಭಾಗಕ್ಕೆ ಸೆಲ್ಲೋಟೇಪ್ ಹಚ್ಚಿ ತಮ್ಮ ಮನೆ ಖಾತೆಗೆ ಸೇರಿಸಿದರು. ನಂತರ ರಿಝರ್ವ್ ಬ್ಯಾಂಕಿಗೆ ದಾಟಿಸಿ ಗಂಟೆಗಟ್ಲೆ ಕ್ಯೂ ನಿಂತು ಬದಲಿ ನಾಣ್ಯಗಳನ್ನು ಪಡೆದರು. ರಿಝರ್ವ್ ಬ್ಯಾಂಕಿನ ಸಂಚಾರಿ ವಾಹನ, ಬೆಂಗಳೂರಿನ ಯಾವ ಯಾವ ಬಡಾವಣೆಗೆ ಹೋಗಿದೆಯೆಂದು ಪತ್ತೆ ಹಚ್ಚಿ, ಅಲ್ಲಿ ಹೋಗಿ ಹೊಸ ನಾಣ್ಯಗಳನ್ನು ಪಡೆದಿದ್ದಾರೆ!’’

ರಾಯರ ಮೌಲ್ಯ ಮಾಪನದ ಈ ಹೊಸ ಮುಖವನ್ನು ಪರಿಚಯಿಸಿದೆ. ಸುಬ್ರಮಣ್ಯ ಟಿಪ್ಪಣಿ ಮಾಡಿಕೊಳ್ಳುತ್ತ, ‘‘ಡಾ|| ಕಾಮತರ ಜೀವನೋಪಾಯದ ವೃತ್ತಿ ಯಾವುದೆಂದು ಅರಿಯಬಹುದೇ?’’ ಎಂದು ಕೇಳಿದರು. ಈ ಪ್ರಶ್ನೆಗೆ ಉತ್ತರ ನೀಡುವದು ಕಷ್ಟಕ್ಕಿಟ್ಟುಕೊಂಡಿತು. ‘‘ಸ್ನಾತಕೋತ್ತರ ಅಭ್ಯಾಸ ಮುಗಿಸಿದ ಬಳಿಕ ಧಾರವಾಡ ಕರ್ನಾಟಕ ಕಾಲೇಜಿನಲ್ಲಿ ಎರಡು ವರ್ಷ ಅಧ್ಯಾಪನ. ಅಮೇರಿಕೆಗೆ ಡಾಕ್ಟರೇಟಿಗೆ ಪಯಣ. ಮರಳಿದ ಬಳಿಗೆ ಮೂರು ವರ್ಷ ಉದಯಪುರ ಕೃಷಿ ವಿಶ್ವವಿದ್ಯಾಲಯದಲ್ಲಿ ಬೋಧನೆ. ನಂತರ ಎರಡು ವರ್ಷ ಕಾಲ ಕಾಮನ್‌ವೆಲ್ತ್ ಸಂಸ್ಥೆಯ ಜೈವಿಕ ಕೀಟ ನಿಯಂತ್ರಣ ಸಂಸ್ಥೆಯಲ್ಲಿ ಸಂಶೋಧನಾಧಿಕಾರಿ. ಆ ಬಳಿಕ ದರ್ಪದ ಮೇಲಧಿಕಾರಿಯ ವರ್ತನೆ ಸರಿಬಾರದೇ, ನೌಕರಿ ತನ್ನ ಜಾಯಮಾನಕ್ಕೆ ಸರಿಹೋಗದು! ಎಂದು ಮನಗಂಡು, ಈಗ್ಗೆ ಮೂರು ದಶಕಗಳಿಂದ ಮಲ್ಲೇಶ್ವರಂದಲ್ಲಿ ವೈಜ್ಞಾನಿಕ ಛಾಯಾಗ್ರಹಣ ವೃತ್ತಿಯನ್ನು ಸ್ವತಂತ್ರವಾಗಿ ನಡೆಸುತ್ತಿದ್ದಾರೆ. ವಿಜ್ಞಾನಿ ಬಂಧುಗಳಿಗೆ ತಮ್ಮಿಂದಾದ ಸಹಾಯ ಸಲ್ಲಿಸುತ್ತಿದ್ದಾರೆ’’ ಸಂಕ್ಷೇಪ ಪರಿಚಯ ನೀಡಿದೆ.

‘‘ಇಷ್ಟೆಲ್ಲ ವೃತ್ತಿಗಳ ಬದಲಾವಣೆ, ಪ್ರವಾಸ ಚಟುವಟಿಕೆಗಳಲ್ಲಿ ಇನ್ನಿತರ ಹವ್ಯಾಸಗಳನ್ನು ಹೇಗೆ ಬೆಳೆಸಿಕೊಂಡರು?’’ ಅವರ ಪ್ರಶ್ನೆ.

ಅವರಿಗೆ ಕೈಕೊಂಡ ಕೆಲಸ ಬಿಟ್ಟರೆ ಬೇರೆ ಆಕರ್ಷಣೆಗಳು ಇಲ್ಲ. ಮೊದಲ ಪುಸ್ತಕವಾದ ಪ್ರವಾಸಕಥನ ಬರೆಯುವ ಮೊದಲು ಸಾಹಿತ್ಯದತ್ತ ಅವರ ಒಲವೇ ಇರಲಿಲ್ಲ. ಆದರೆ ಈ ಕೃತಿಯೇ ಅತ್ಯಂತ ಜನಪ್ರಿಯವಾಯಿತು. ನಂತರ ವಿವಿಧ ವಿಷಯಗಳ ಮೇಲೆ ಇಪ್ಪತ್ತು ಪುಸ್ತಕಗಳನ್ನು ಪ್ರಕಟಿಸಿದ್ದಾರೆ. ತಾನು ನೋಡಿದ ಪ್ರದೇಶಗಳ ಜನಜೀವನ ಕುರಿತು, ಸಹಸ್ರಾರು ಚಿತ್ರಗಳನ್ನು ಸೆರೆಹಿಡಿದು ದಾಖಲೆ ಸ್ಥಾಪಿಸಿದ್ದಾರೆ. ಚಿತ್ರ, ರೇಖಾಚಿತ್ರ, ಛಾಯಾಚಿತ್ರಗಳೆಲ್ಲ ಅವರ ಆಸಕ್ತಿಯ ಕ್ಷೇತ್ರಗಳು'' ಹೆಮ್ಮೆಯಿಂದ ಹೇಳಿದೆ.

''ಡಾ|| ಕಾಮತರ ಪ್ರತಿಭೆಯನ್ನು ದೂರದರ್ಶನದವರು ಬಳಸಿಕೊಳ್ಳಲಿಲ್ಲವೇ?''

''ರೇಡಿಯೋ ದೂರದರ್ಶನಗಳಿಗಿಂತ ತುಂಬ ಮುಂದೆ ಹೋಗಿದ್ದಾರೆ. ಇಂದಿನ ದಿನಗಳಲ್ಲಿ ನಮ್ಮ ಕುಟುಂಬದ್ದೇ ಇಂಟರ್‌ನೆಟ್ ವೆಬ್‌ಸ್ಯಾಟ್ ಇದೆ. ಅದಕ್ಕಾಗಿ ಪ್ರತಿವಾರ ಲೇಖ+ಚಿತ್ರಗಳನ್ನು ಕಳಿಸುತ್ತ ಇರುತ್ತಾರೆ. ಇದಕ್ಕಾಗಿ ಛಾಯಾಗ್ರಹಣ ಮಾಡುತ್ತ, ಕೊಳಚೆ ಪ್ರದೇಶ, ಭಿಕ್ಷುಕರ ತಾಣ, ಓಣಿ, ಕೇರಿಗಳನ್ನು ಅಲೆಯುತ್ತ ಇರುತ್ತಾರೆ. ಇಂಥ ಸಂದರ್ಭಗಳಲ್ಲಿ ಅನೇಕರಿಗೆ ತಮಗೆ ಬೇಕಾದ ವಿಳಾಸ ಸಿಗದೇ ಕಷ್ಟ ಪಡುವಾಗ, ರಾಯರ ಪರೋಪಕಾರ ಬುದ್ಧಿ ಜಾಗೃತವಾಗುತ್ತದೆ. ನಿಮ್ಮಂತೆ ವಿಳಾಸ, ಮನೆ ನಂ. ಇತ್ಯಾದಿಗಳನ್ನು ಹುಡುಕಿಕೊಂಡು ಬರುವವರ ಸಲುವಾಗಿ, ಮಲ್ಲೇಶ್ವರಂದ ದೊಡ್ಡ ನಕಾಶೆ ರಚಿಸಿದ್ದಾರೆ. ಅದರಲ್ಲಿ ಮುಖ್ಯ ಮತ್ತು ಅಡ್ಡ ರಸ್ತೆಗಳನ್ನು ಕಾಣಿಸಿದ್ದಾರೆ. ಪ್ರತಿಯೊಂದು ಕಟ್ಟಡದ ಹಳೆಯ ಮತ್ತು ಹೊಸ ನಂಬರುಗಳನ್ನು ನಮೂದಿಸಿ ಇಟ್ಟುಕೊಂಡಿದ್ದಾರೆ. ಇವುಗಳ ನೆರವಿನಿಂದ ಪ್ರತಿ ದಿನ ಕನಿಷ್ಟ 10 ಜನಕ್ಕೆ ಮನೆ ಹುಡುಕಲು ಸಹಾಯ ಮಾಡುತ್ತಾರೆ. ಎಷ್ಟೋ ವಾಹನ ಚಾಲಕರು ಬಂದು ಇವರ ನೆರವು ಪಡೆಯದೇ ಇರುವುದಿಲ್ಲ.... ಎನ್ನುತ್ತಿದ್ದಂತೆ, ಇಂಥ ಪರೋಪಕಾರಿ ರಾಯರು ನನಗೂ ಉಪಕಾರ ಮಾಡುವಂತಿದ್ದರೆ... ಆಗಂತುಕರು ಉದ್ಗರಿಸುತ್ತಿದ್ದಂತೆ ಡೋರ್ ತಿರುವಿ, ರಾಯರು ಒಳಗೆ ಬಂದರು.

ತಬ್ಬಿಬ್ಬಾದ ಆಗಂತುಕರನ್ನು ಉದ್ದೇಶಿಸಿ, ''ಏನ್ರಿ? ಡಾ|| ಕೃಷ್ಣಾನಂದ ಕಾಮತರ ಮನೆ ಸಿಕ್ಕಿತೇ?' ಎಂದು ತುಂಟ ಧ್ವನಿಯಲ್ಲಿ ವಿಚಾರಿಸಿದರು.'' ತಪ್ಪಾಯಿತು ಸಾರ್! ನಾನು ಹುಡುಕುತ್ತಿರುವ ವ್ಯಕ್ತಿ ತಾವೇ! ಎಂದು ಕನಸು - ಮನಸಿನಲ್ಲಿಯೂ ಎಣಿಸಿರಲಿಲ್ಲ. ಇಲ್ಲ ಸಲ್ಲದ ಪ್ರಶ್ನೆಗಳನ್ನೆಲ್ಲ ಕೇಳಿದೆ. ನಿಮ್ಮ ಬಹುಮುಖ ಪ್ರತಿಭೆಯ ಆಳವನ್ನು ಭೇದಿಸಿ ಮಹಾಪ್ರಬಂಧ ಬರೆಯಲಾದೀತೇ? ಎಂಬ ಸಂಶಯ ಕಾಡಲಾರಂಭಿಸಿದೆ! ಒಂದಾನು ವೇಳೆ

ಅದು ಸಾಧಿಸದಿದ್ದರೆ, ನಿಮ್ಮ ವಿನೋದ-ವ್ಯಕ್ತಿತ್ವವನ್ನೆ ಎತ್ತಿ ಹಿಡಿದು, ಇಂದು ನಡೆದ ಘಟನೆಯನ್ನೆ ಹಿನ್ನೆಲೆಯಾಗಿ ಬಳಸುತ್ತೇನೆ. ತಾವು ಒಪ್ಪಿಗೆ ನೀಡಬೇಕು. ನಮ್ರತೆಯಿಂದ ಸುಬ್ರಹ್ಮಣ್ಯ ನುಡಿದರು. ''ನಿಮಗೆ ಡಾಕ್ಟರೇಟು ಸುಲಭದಲ್ಲಿ ಸಿಗಬೇಕಂದರೆ, ಯಾವನೊಬ್ಬ, ಕವಿ ಕಾದಂಬರಿಕಾರರನ್ನು ಆರಿಸಿಕೊಳ್ಳಿ! ನನ್ನಂಥವನ ಬೆನ್ನು ಹಿಡಿದರೆ ಗೊಂದಲಪುರದಲ್ಲಿ ಅಲೆದೇ ದಣಿಯುತ್ತೀರಿ! ಸದ್ಯಕ್ಕಂತೂ ಕೈಕಾಲು ತೊಳೆದು ಊಟಕ್ಕೇಳಿ!'' ಮನಃಪೂರ್ವಕವಾಗಿ ಅತಿಥಿಯನ್ನು ಉಪಚರಿಸಿದರು. 'ನನಗೇನೂ ಪಿ.ಹೆಚ್.ಡಿ. ಡಿಗ್ರಿಯ ಅಗತ್ಯವಿಲ್ಲ. ನಿಗೂಢನಲ್ಲದ ಇಂಥ ಓರ್ವರ ಅಂತರಾಳ ಅರಿಯುವುದೇ ಮಹಾಭಾಗ್ಯ!'' ಎಂದಾಗ ನಾವು ಮೂವರೂ ಬೇರೆ ಬೇರೆ ಕಾರಣಕ್ಕಾಗಿ ನಕ್ಕೆವು.



''ದೋಸೆ ಸ್ಯಾಂಡ್‌ವಿಚ್ ತಿಂದ್ರೆ ತೂಕ ಕಡಿಮೆ ಆಗುಲ್ವೇನ್ರೀ''

# ನೀರವತೆಯ ನಾದ

- ಭಾರತೀ ಕಾಸರಗೋಡು

ದಸರೆಯ ಸಂದರ್ಭದಲ್ಲೇ ಮೈಸೂರಿನಲ್ಲಿ ಅಕ್ಕನ ಮನೆಯ ಗೃಹಪ್ರವೇಶ. ಆದರ ಅದೇ ಸಮಯದಲ್ಲಿ ಇಲ್ಲಿ ರಜನಿಗೆ ನೂರೆಂಟು ತರಲೆ ತಾಪತ್ರಯ. ಇತ್ತೀಚೆಗಂತೂ ಅವಳಿಗೆ ಸಾಕೆನಿಸಿಬಿಟ್ಟಿದೆ. (ಹೌದು ಹೌದು... ಸಂಸಾರ ಮಧ್ಯದಲ್ಲಿ ಕಷ್ಟವಂತೆ!) ವಾನಪ್ರಸ್ಥಕ್ಕೆ ಹೋಗಿಬಿಡುವ ಅಂತ ಸೀರಿಯಸ್ಸಾಗಿ ಆಲೋಚಿಸುತ್ತಾಳೆ. ಸಮಸ್ಯೆ ಏನಂದರೆ ಇವಳು ಅಡವಿಗೆ ಹೋಗಿಬಿಡುವಷ್ಟು ವಯಸ್ಸು ಅವಳ ಮಕ್ಕಳಿಗೆ ಆಗಿಲ್ಲ. ಆದರೆ ಇವಳ ಸಮಸ್ಯೆಗಳನ್ನು ಬಂಧು ಮಿತ್ರರು ಯಾವಾಗಲೂ ಕೇಳುತ್ತಾರೆಯೇ? ಅದರಲ್ಲೂ ಅವಳ ಅಕ್ಕ ಎಂದಿಗೂ ಇಲ್ಲ "ಕಟ್ಟಿಟ್ಟು ಬಿಡು ನಿನ್ನ ಕತೆಗಳನ್ನೆಲ್ಲ..." ಕಠೋರವಾಗೇ ಗದರುತ್ತಾಳೆ. ಅಷ್ಟಲ್ಲದೆ ಅಮ್ಮ ಅವಳಿಗೆ ವಿಕ್ಟೋರಿಯಾ ರಾಣಿ ಅಂತ ಹೆಸರಿಟ್ಟಿಲ್ಲ. "ಫಂಕ್ಷನ್ ಹಿಂದಿನ ದಿನ ಬರ್ತೀನಿ ಕಣೇ ಅಕ್ಕಾ" ಅಂದರೆ ಇದ್ದಕ್ಕಿದ್ದಂತೆ ಭಾವ ವ್ಯವಸ್ಥೆಯಲ್ಲಿ ದಿಢೀರ್ ಬದಲಾವಣೆ ಆಗಿ "ಹೀಗೆ ಮಾತಾಡೋಕೆ ಮನಸ್ಸಾದ್ರೂ ಹ್ಯಾಗೇ ಬರುತ್ತೆ?... ಮಗ-ಮಗಳು ಇಬ್ರೂ ವಿದೇಶದಲ್ಲಿ ಕೂತಿದಾರೆ... ಅಪ್ಪ-ಅಮ್ಮನ್ನ ಮೊದಲೇ ಕಳಕೊಂಡಾಯ್ತು... ಏನೋ... ಇರೋ ಒಬ್ಬ ತಂಗಿ ಅಂತ..." ಫೋನಿನ ಆ ತುದಿಯಿಂದ ಭೀಕರ ಬಿಕ್ಕಳಿಕೆಗಳೂ ಉದ್ಗಾರಗಳೂ ಪ್ರಾರಂಭವಾಗಿ ಬಿಡುತ್ತವೆ. ಬಹುಶಃ ಸೆರಗಿನಿಂದ ಕಣ್ಣು-ಮೂಗು ಉಜ್ಜುತ್ತಿರಬೇಕು. "ತಾಯೇ.. ಪರಶಿವಜಾಯೇ,.. ಗೋಳಾಡಬೇಡ, ನಾಲ್ಕುದಿನ ಮುಂಚೇನೇ ಬರ್ತೀನಿ.,.. ಸರೀನಾ?" ರಜನಿ ಸಂತೈಸಲೇಬೇಕು.

ಇತ್ತ ಮನೆಯಲ್ಲಿ ಮಹತ್ವದ ಮೀಟಿಂಗು ಪ್ರಾರಂಭವಾಯಿತು. "ನಾವೆಲ್ಲ ಅಷ್ಟು ಮುಂಚೆ ಬರಕ್ಕಾಗಲ್ಲ. ನೀನೊಬ್ಳು ಮೊದಲು ಹೋಗಿರು. ನಾವು ಹಿಂದಿನ ದಿನ ರಾತ್ರಿ ಬರ್ತೀವಿ" ಅಂತ ಘೋಷಿಸಿ "ಕೆಲವು ದಿನ ಆದ್ರೂ ನಾವಿಲ್ಲಿ ಹಾಯಾಗಿರ್ತೀವಿ" ಅಂತಲೂ ಸೇರಿಸಿದವು ಎಲ್ಲ ದನಿಗಳು. "ನನ್ನನ್ನೇ ಅಂತೀರೇನ್ರೋ?... ನಿಮ್ಮಗಳ ಬಾಯಿಗೆ ಸಕ್ಕರೆ ಬೀಳಲಿ! ನಿಮ್ಮನೆ ಕುದುರೆ ಲಾಯದಲ್ಲಿ ಎಂಟೆಂಟು ಆನೆಮರಿ ಕಟ್ಟಲಿ!..." ಅಂತೆಲ್ಲ ಯಾವುದೋ ಸಿನೆಮಾ ಡೈಲಾಗು ನೆನಪು ಮಾಡಿಕೊಂಡು ಬೈದು, ನನ್ನ ಮಾತೇ ಕಟ್ಟ ಕಡೆಯದೆಂಬುದನ್ನು ಮತ್ತೊಂದು ಸಾರಿ ಯಶಸ್ವಿಯಾಗಿ ಸಾಬೀತುಗೊಳಿಸಿದಳು.

ಅಕ್ಕನ ಮನೆಯ ಮುಂದೆ ಅವಳು ಆಟೋದಿಂದಿಳಿದಾಗ ಅಂಗಳದಲ್ಲೇ ನಿಂತು ಕಾಯುತ್ತಿದ್ದ ಅಕ್ಕ "ಇದೇನೇ ಜಾನೀ ಕೈತುಂಬ ಕಡತಗಳೇ

ಇದೆಯಲ್ಲೇ?'' ಮೂಗಿನ ಮೇಲೆ ಬೆರಳೇರಿಸಿದಳು. ಅವಳು ತಾಪತ್ರಯದ ವಜನಿನಿಂದ ಏದುತ್ತಾ ''ಹ್ದೂ ಕಣೇ ಅಕ್ಕಾ, ಸ್ವಲ್ಪ ಕೆಲ್ಸ ಇತ್ತು. ಇಲ್ಲಾದ್ರೆ ಬೆಂಗ್ಳೂರು ಥರಾ ಜವಾಬ್ದಾರಿ ಇರಲ್ವಲ್ಲ! ಪಟ್ಟಾಗಿ ಕೂತು ಮುಗಿಸಿಬಿಡೋಣಾಂತ... ಅಷ್ಟೆ!'' ಅಂದಳು. ಅಕ್ಕಮ್ಮ ನಿಟ್ಟುಸಿರಿಟ್ಟು ''ಸರಿ... ಹೇಗೂ ರವಿ ರೂಮು ಖಾಲಿ ಇದ್ಯಲ್ಲ... ಎಲ್ಲ ಅಲ್ಲೇ ಇಟ್ಕೋ!... ಕಾಫಿ ಬೇಕಾ?'' ಅಂದಳು.

ಮೈಸೂರಿನಲ್ಲಿ ರಜನಿಯ ದಿನಚರಿ ದಿವಿನಾಗಿತ್ತು. ಎಲ್ಲಕ್ಕಿಂತ ದೊಡ್ಡ ನೆಮ್ಮದಿ ಅಂದರೆ ಬೆಳಗಾಗೆದ್ದು ''ಹಾಲು ಕುಡೀರೋ...'' ಅಂತ ಹೊಡಕೊಂಡು, ಅವಳು ಅಷ್ಟು ಹೊಡಕೊಂಡರೂ ಅವು ಕ್ಯಾರೇ ಅನ್ನದೆ ಹಾಲಿನ ಲೋಟಗಳನ್ನು ಮನೆಯ ಮೂಲೆ - ಮೂಲೆಗಳಲ್ಲಿ ಮಡಗಿ, ಅದು ಮೊಸರಾಗಿ, ಅದನ್ನು ಕಂಡು ಇವಳಿಗೆ ಕೆಂಡ ಕಾರಬೇಕೆನ್ನಿಸಿದರೂ, ಹಾಗೆ ಮಾಡುವುದು ಮುಂದಿನ ತನ್ನ ಸ್ವಂತ ಕೆಲಸಗಳಿಗೆ ಮಾರಕ ಅನ್ನುವ ಜ್ಞಾನೋದಯ ಕೂಡಲೇ ಉಂಟಾಗಿ ''ಬಡವನ ಸಿಟ್ಟು ದವಡೆಗೆ ಮೂಲ'' ಎಂಬಂತೆ ಸುಮ್ಮನಾಗಿಬಿಡುವುದು... ಇಂಥೆಲ್ಲ ರಗಳೆಗಳಿಲ್ಲ. ಮತ್ತೊಂದು ಮುಖ್ಯ ಸಂತೋಷ ಮುಂಜಾನೆಯ ಪ್ರಶಾಂತತೆಯಲ್ಲಿ ಮೈಸೂರಿನ ರಸ್ತೆಗಳಲ್ಲಿ ವಾಕಿಂಗ್ ಹೋಗುವುದು ನೀರವತೆಯ ನಾದವನ್ನಾಲಿಸಲು ಮೈಸೂರಿಗೇ ಹೋಗಬೇಕು! ಕುವೆಂಪು ಅವರ ಮನೆಯ ಸಮೀಪವೇ ಅಕ್ಕನ ಮನೆ. ಉದಯರವಿಯ ಮುಂದೆ ಹಾಯುವಾಗ ನಡಿಗೆ ನನ್ನಿಂದ ತಾನೇ ನಿಧಾನವಾಗಿ ಬಿಡುತ್ತದೆ. ಒಡೆಯನನ್ನು ಕಳೆದುಕೊಂಡು ಉದಯರವಿಯ ಗೋಡೆಗಳೂ, ಮರಗಿಡ - ಬಳ್ಳಿಗಳೂ ಮಂಕಾಗಿ ನಿಂತಂತಿವೆ. ಕವಿ ನಡೆದಾಡಿದ ಹೆಜ್ಜೆ ಗುರುತುಗಳನ್ನು, ಕುಳಿತ - ನಿಂತ ಭಾವ ಭಂಗಿಗಳನ್ನು ಕಲ್ಪಿಸಿಕೊಳ್ಳಲು ಪ್ರಯತ್ನಿಸುತ್ತಿದ್ದಾಳೆ. ''ಕ್ಲೈಬ್ಯವನು ಸಂಹರಿಸೋ। ದೌರ್ಬಲ್ಯವನು ದಹಿಸೋ।'' ಎಂದವರು ಬರೆದಾಗ, ಯಾವ ಮರ್ಮಾಘಾತ ಅವರನ್ನು ನೋಯಿಸಿತ್ತು? ''ನಿನ್ನೆ ನಿನ್ನೆಗೆ ಇಂದು ಇಂದಿಗೆ ಇರಲಿ ನಾಳೆಯು ನಾಳೆಗೆ'' ಎಂದು ಹಾಡಿದಾಗ ಅವರು ಯಾವ ಮರದಡಿ ನಿಂತು ಯಾವ ಹಕ್ಕಿಯನ್ನು ನೋಡುತ್ತಿದ್ದರು? ''ಮಹತ್ತಾಗಿ ಸೋಲುವುದು ಗೆಲುವಿನ ಮಹತ್ತಿಗಿಂತ ಕೀಳಲ್ಲ'' ಅನ್ನುವಂಥ ಮಹತ್ವದ ಸಾಲುಗಳು ಅವರಿಗೆ ಎಲ್ಲಿ ಹೊಳೆದವು?... ಇವೆಲ್ಲ ಆಲೋಚನೆಗಳಲ್ಲಿ ವಾಕಿಂಗ್ ಮುಗಿದದ್ದೇ ಗೊತ್ತಾಗುವುದಿಲ್ಲ.

ಮನೆಗೆ ಬಂದ ಮೇಲೆ ಕಾಲುನೋವು ನಿವಾರಣೆಗಾಗಿ ಮತ್ತೊಂದೆರಡು ಡೋಸು ಕಾಫಿ. ಸ್ನಾನಕ್ಕಂತೂ ಅವಾಂತರವೆಂಬುದೇ ಇಲ್ಲ. ''ಊಟಕ್ಕೆ

ಮೊದಲು... ಸ್ನಾನಕ್ಕೆ ಹಿಂದು!'' ಅಮ್ಮನ ಮಾತುಗಳನ್ನು ಅಕ್ಕನ ಮನೆಯಲ್ಲಿ ಶಿರಸಾವಹಿಸಿ ಪಾಲಿಸುತ್ತಾಳೆ. ಜತೆಗೆ ಇಲ್ಲಿರುವುದು ತಾಮ್ರದ ಹಂಡೆ. ಪರಿಮಳ - ರುಚಿಗಳಿಲ್ಲದ ನೀರಿನ - ಒಂದೆರಡು ಬಕೆಟ್‌ಗಳಿಗೆ ಸೀಮಿತವಾದ - ಗುಬ್ಬಚ್ಚಿ ಸ್ನಾನ ಅಲ್ಲ ಇದು. ಸಮೃದ್ಧ ಕಾವೇರಿ ನೀರಿನ ಜತೆಗೆ ಸಮೃದ್ಧ ಸಮಯಾವಕಾಶವೂ ಇದೆ. ಹಂಡೆಯನ್ನು ಕಂಡುಹಿಡಿದವರಿಗಂತೂ ಭಾರತರತ್ನ ಸಲ್ಲಲೇಬೇಕು. ಮೊಗೆದಷ್ಟೂ ತುಂಬಿಕೊಳ್ಳುವ ಅಕ್ಷಯಪಾತ್ರೆ ಅದು!

''ಬಾರೇ ಕೂಸು, ನಿಂಗೆ ನಾನು ನೀರು ಕಾಸಿ ಕೊಡ್ತೀನಿ'' ಅಂತ ಒಣ ತೆಂಗಿನ ಗರಿಗಳನ್ನೂ, ಬೆರಣಿಗಳನ್ನೂ ಪೇರಿಸಿ - ಪೇರಿಸಿ, ಕುಕ್ಕುರುಗಾಲಲ್ಲಿ ಕೂತು ಊದುಗೊಳವೆಯಿಂದ ಉಫ್ ಉಫ್ ಎಂದೂದಿ ದಿವ್ಯಾಗ್ನಿಯನ್ನು ಪ್ರಜ್ವಲಿಸಿಬಿಡುತ್ತಾ ಹಂಡೆ ಭರ್ತಿ ಕುದಿನೀರು ರೆಡಿಮಾಡಿಕೊಡುವ ಅಜ್ಜಿ ಬೇರೆ ಇದ್ದಾರೆ. ಉತ್ಸಾಹವೇ ಉಸಿರಾಗಿರುವ, ಸುಟಿ ಸುಟಿಯಾಗಿರುವ ಈ ವಯೋವೃದ್ಧೆಗೆ ರಜನಿಯಲ್ಲಿ ಇನ್ನಿಲ್ಲದಷ್ಟು ಮಮತೆ. ಮತ್ತೆ? ಕರೆದಾಗಲೆಲ್ಲ ಅವರಿಗೆ ಚೌಕ-ಭಾರಕ್ಕೆ, ಪಗಡೆಗೆ ಕಂಪೆನಿ ಕೊಡುವವಳು ಅವಳೊಬ್ಬಳೇ! ಮಾತ್ರವಲ್ಲ, ಕವಡೆ - ದಾಳಗಳನ್ನು ಉರುಳಿಸುವಾಗ, ಕಾಯಿಗಳನ್ನು ನಡೆಸುವಾಗ ಅವರು ಮಾಡುವ ಕ್ಷಿಪ್ರಕಪಟ ಗೊತ್ತಾದರೂ ಗೊತ್ತಾಗದಂತೆ ನಟಿಸಿ ಆಟದಲ್ಲಿ ತಾನೇ ಸಾನುರಾಗದಿಂದ ಸೋಲುತ್ತಾಳೆ. ಇದೊಂದು ರೀತಿ ಸೋತುಗೆಲ್ಲುವ ರೀತಿ. ಅವಳ ಗೆಲುವು ಏನೆಂದಿರಾ? ತಾನೇ ಗೆದ್ದುಬಿಟ್ಟೆನೆಂಬ ಶಿಶುಧಿಮಾಕಿನಲ್ಲಿ ಅಜ್ಜಿಯ ಹಣ್ಣುಗೆನ್ನೆಗಳಲ್ಲಿ ಮೂಡುವ ಮುಗ್ಧ ಸುಂದರ ಮಂದಹಾಸ! ಅವಳು ಹದಿನೈದು ದಿವಸ ಠಿಕಾಣಿ ಹೂಡಿ, ಹದಿನಾರನೇ ದಿನ ಹೊರಟಾಗಲೂ ''ನೀನು ಇದ್ದ ಹಾಗೇ ಆಗಲಿಲ್ವಲ್ಲೇ ಮರೀ'' ಎಂದು ಹಲುಬುವ, ಅವರೆಕಾಯಿ ಸುಲಿದು, ಹಿದುಕಿ, ಕವರಿನಲ್ಲಿ ತುಂಬಿಸಿ ಕೈಗಿಟ್ಟು ''ಹೋದ ತಕ್ಷಣ ಫ್ರಿಡ್ಜಿನಲ್ಲಿ ಇಟ್ಬಿಡು... ದಿನಾ ಸ್ವಲ್ಪ ಸ್ವಲ್ಪ ಮಾಡ್ಕೊ...'' ಕಕ್ಕುಲತೆ ತೋರುವ, ಅವಳು ಬರೆದದ್ದನ್ನೆಲ್ಲ ತುಳಸೀಕಟ್ಟೆ ಹತ್ತಿರ ಕೂತು ಕನ್ನಡಕವಿಲ್ಲದೆಯೇ ಓದಿ ''ಭೇಷಕ್ಕಾಗಿದೆ!'' ಕಣ್ಣರಳಿಸಿ ತಲೆದೂಬಿಡುವ ದ್ರೌಪದಜ್ಜಿಗೆ ಪಗಡೆ ಆಟದಲ್ಲಿ ಸೋಲಬೇಕಾದ್ದು ಧರ್ಮಸಮ್ಮತವೂ ಹೌದು.

ಈ ಅಜ್ಜಿಯ ಕೃಪೆಯಿಂದ ಸುದೀರ್ಘ ಸ್ನಾನವಾದ ನಂತರ ಮಧ್ಯಾಹ್ನದವರೆಗೆ ಬರೆಯುವ ಕೆಲಸ. ಆಮೇಲೆ ಅಕ್ಕ ರುಚಿಕಟ್ಟಾಗಿ ಮಾಡಿ ಬಡಿಸುವ ಊಟ. ಸ್ವಲ್ಪ ಹೊತ್ತು ಗೋಪಣ್ಣನ ಜತೆ ಹರಟೆ. ಲಘುವಾಗಿ ಶಯನೋತ್ಸವ. ಸಾಯಂಕಾಲದ ಟೀ, ಬರವಣಿಗೆ, ಕೈ ತೋಟದಲ್ಲಿ ಸುತ್ತಾಟ. ಅಕ್ಕನ ತೋಟದಲ್ಲಿ ಬಗೆ ಬಗೆಯ ಮರಗಿಡಗಳಿವೆ. ಏಲಕ್ಕಿಬಾಳೆ, ಪಚ್ಚೆಬಾಳೆ ಹೀಗೆ

ಅದೆಷ್ಟೋ ಜಾತಿಯ ಬಾಳೆಗಿಡಗಳಿವೆ. ಎಲ್ಲವೂ ಗೊನೆ ಬಿಟ್ಟಿವೆ. (ಗೊನೆ ಹೊತ್ತ ಗಿಡದ ತಾಯ್ತನದ ಚೆಲುವನ್ನು ಅಕ್ಷರಗಳಲ್ಲಿ ವರ್ಣಿಸಲಾಗದು) ಕಿಟಕಿ ಪಕ್ಕವೇ ಇರುವ ದಾಳಿಂಬೆ ಗಿಡದಲ್ಲಿ ಪುಟ್ಟ ಹಕ್ಕಿಯೊಂದು ಮುದ್ದಾಗಿ ಗೂಡು ಕಟ್ಟಿದೆ. ಅಪರೂಪದ ಕೇಸರಿ ಬಣ್ಣದ ಸ್ಫಟಿಕ ಇನ್ನೂ ನೆಲಮಟ್ಟದಿಂದ ಮೇಲೇ ಬಂದಿಲ್ಲ. ಆಗಲೇ ಹೂ ತಳ್ಳಿದೆ! ಇವೆಲ್ಲದರ ವಿವರ ವೀಕ್ಷಣೆ. ಮತ್ತೆ ಟೇಬಲ್ಲು. ಮಧ್ಯೆ ಮಧ್ಯೆ ಕಾಫಿ. ಅವಳೇನೂ ಕೇಳುವುದಿಲ್ಲ. ಅಕ್ಕನೇ ತಂದು ತಂದು ಕೊಡುತ್ತಾಳೆ. ''ಸುಮ್ನೆ ಹೀಗೆ ಕಾಫಿ ಕುಡೀತಾ ಇದ್ರೆ ಪಿತ್ರ ನೆತ್ತಿಗೇರುತ್ತೆಕಣಯ್ಯಾ'' ಅಂತ ಗೋಪಣ್ಣ ಹೋಗಿ ಮೊನಾಕೋ ಬಿಸ್ಕೆಟ್ ತಂದು ಕೊಡುತ್ತಾರೆ. ಮತ್ತಿನ್ನೇನು? ರಾತ್ರಿಯೂಟ, ವಿ.ವಿ. ಮೊಹಲ್ಲದ ನಿರ್ಜನತಂಪು. ರಸ್ತೆಗಳಲ್ಲಿ ಸಣ್ಣದೊಂದು ಸಂಚಾರ, ಮನಸ್ಸಿದ್ದರೆ ಬರವಣಿಗೆ ಇಲ್ಲದಿದ್ದರೆ ಗೋಪಣ್ಣನ ಮತ್ತದೇ ಹಳೆ ಜೋಕುಗಳು. ಆಮೇಲೆ ದಿನದ ಕಟ್ಟ ಕಡೆಯ ಕಾರ್ಯಕ್ರಮ. ಅಕ್ಕನ ಕಾಳಜಿಯಿಂದಾಗಿ ಶುಭ್ರವಾಗಿ ಘಮ್ಮೆನ್ನುವ ಮೆತ್ತನೆ ದಿಂಬಿಗೆ ಸ್ವಸ್ಥವಾಗಿ ತಲೆಕೊಟ್ಟುಬಿಡುವುದು... ಮರು ಬೆಳಿಗ್ಗೆ ಕಾಂಪೌಂಡ್ ಬದಿಯ ಗುಲ್‌ಮೊಹರ್ ಮರದಲ್ಲಿ ಮೆತ್ತಗೆ ಹುದುಗಿರುವ ಮತ್ತೆ ಕೋಗಿಲೆ ಮೆಲ್ಲಗೆ ಎಬ್ಬಿಸುವ ತನಕ!

ಹೀಗೆ ಮೂರುದಿನ ಆನಂದವಾಗಿ ಕಳೆಯಿತು. ಮುಗಿಸಬೇಕೆಂದುಕೊಂಡಿದ್ದ ಕೆಲಸವೂ ಮುಗಿದು ಮನಸ್ಸು ಹಗುರಾಯಿತು. ಆದರೇನು? ಬೇರೊಂದು ಕೆಲಸವನ್ನು ಕೂಡಲೇ ಹೊಂಚಿಕೊಂಡಳು. ಇಲ್ಲಿಂದ ಬೆಂಗಳೂರಿಗೆ ಹೋಗುತ್ತಿದ್ದಂತೆ ಒಂದು ಸಾಹಿತ್ಯ ಕಾರ್ಯಕ್ರಮ. ಸಾಕಷ್ಟು ಜವಾಬ್ದಾರಿಯ ಕೆಲಸ. ''ಇನ್ವಿಟೇಶನ್ ಇಲ್ಲೇ ಪ್ರಿಂಟ್ ಮೂಡಿಸಿಕೊಂಡು ಹೋಗಿಬಿಡ್ತೀನಿ ಕಣೇ ಅಕ್ಕಾ... ಹೋದ ತಕ್ಷಣ ಅದನ್ನ ರವಾನೆ ಮಾಡೋದು ಸುಲಭ ಆಗುತ್ತೆ...'' ಅಂದಳು. ''ಹಾಗೇ ಮಾಡು'' ಅಂದಳು ಅಕ್ಕ. ಸರಿ ಬೆಳಿಗ್ಗೆಯೆಲ್ಲ ವಿವರಗಳನ್ನು ಸಿದ್ಧಪಡಿಸಿದ್ದು, ಪ್ರೆಸ್ಸಿಗೆ ಹೋಗಿ ಕೊಟ್ಟು ಬಂದದ್ದು ಆಯಿತು. ''ಸಾಯಂಕಾಲ ಬಂದು ಪ್ರೂಫ್ ನೋಡಿಬಿಡಿ ಮೇಡಂ.... ನಾಳೆ ಬೆಳಿಗ್ಗೆ ಕೊಟ್ಟುಬಿಡ್ತೀನಿ... ಅರ್ಜೆಂಟ್ ಅಂತೀರಲ್ಲ ಪಾಪ?'' ಅಂದ ಪ್ರೆಸ್ಸಿನವ. ಏನೆಂಥ ಒಳ್ಳೇ ಮನುಷ್ಯ! ಸಾಯಂಕಾಲ ಅವಳು ಪ್ರೆಸ್ಸಿನಿಂದ ಬರುತ್ತಿದ್ದಂತೆ ''ಅರಸು ರೋಡಲ್ಲಿ ಲೆದರ್ ಆರ್ಟಿಕಲ್ಸ್‌ದು ಸೇಲ್ ಹಾಕಿದಾರೆ... ಒಂದು ಒಳ್ಳೇ ಪರ್ಸ್ ತಗೋತೀಯಂತೆ ನಡಿ... ಯಾವಾಗ ನೋಡಿದ್ರೂ ಸ್ವಲ್ಪವೂ ಸಂಕೋಚವಿಲ್ಲದೆ ಹರಕು - ಮುರುಕು ಚೀಲ ಹಿಡಕೊಂಡು ತಿರುಗಿತ್ತೀಯಲ್ಲ!'' ಅಕ್ಕನೆಂದಳು. ಬೆತ್ತದ ಕುರ್ಚಿಯಲ್ಲಿ ಧೊಪ್ಪನೆ ಕುಸಿದು ''ಅಯ್ಯೋ, ಇರೋದೇ ಚೆನ್ನಾಗಿದೆ ಬಿಡೇ ಅಕ್ಕಾ'' ವಿರಕ್ತಿಯ ರಾಗ ಪಲುಕಿದಳು. ''ನಳಪಾಕದಲ್ಲಿ ದೋಸೆ

ಕೊಡಿಸ್ತೀನಿ ಬಾರೇ'' ಅಕ್ಕ ಅನ್ನುತ್ತಿದ್ದಂತೆ ಸದ್ದಿಲ್ಲದೆ ಎದ್ದು ಅವಳ ಹಿಂದೆ ಹೊರಟಳು. ಮಾರನೇ ದಿನವೆ ಅಕ್ಕನ ಮನೆಯ ಗೃಹಪ್ರವೇಶ!

ಅಕ್ಕ ಅವತ್ತು ಬೆಳಗಿನ ಐದಕ್ಕೇ ಎದ್ದಳು. ''ಈಗ್ಲೇ ಎದ್ದು ಮುಖ ತೊಳೆದರೆ ಕಾಫಿ ಸಿಗುತ್ತೆ... ಇಲ್ಲಾಂದ್ರೆ ಆಮೇಲೆ ನೀನೇ ಮಾಡ್ಕೋ ಬೇಕಾಗುತ್ತೆ...'' ಬಾಂಬ್ ಸಿಡಿಸಿದಳು. ಇದು ನಿಜವಾಗಿ ಫಜೀತಿ! ಹಾಗೆಲ್ಲ ಬೇರೆಯವರ ಮನೆಯಲ್ಲಿ ಕೆಲಸ ಮಾಡಲು ತೋಚುವುದಿಲ್ಲ. ಯಾವ ಪಾತ್ರೆಯೋ ಯಾವ ಒಲೆಯೋ ಹಾಲೆಲ್ಲಿದೆಯೋ... ಪರದಾಡಬೇಕಾಗುತ್ತದೆ. ಅದಕ್ಕಿಂತ ಚಳಿ ಅನುಭವಿಸಿದರೂ ಚಿಂತಿಲ್ಲ ಬೇಗೆದ್ದು ಎಲ್ಲರ ಜತೆ ಕಾಫಿ ಕುಡಿದು ಬಿಡೋದೇ ವಾಸಿ! ಹೀಗೆ ತೀರ್ಮಾನಿಸಿ ಗಂಡನ ಪಕ್ಕೆ ತಿವಿದು ''ಏಳಿ, ಏಳಿ! ಪುರೋಹಿತರು ಬೇಗ ಬರ್ತಾರೆ ಅಂತ ಅಕ್ಕ-ಭಾವ ಮೊದಲು ಹೊರಟಿದಾರೆ! ಅವರಿಗೆ ಸಹಾಯ ಮಾಡಬೇಕು, ಎದ್ದೇಳಿ!... ಹೀಗೆಲ್ಲ ಸೋಮಾರಿತನ ಪಡಬಾರದು!'' ಅಂತ ಅವರನ್ನು ಎಬ್ಬಿಸಿದಳು. ಆಮೇಲೆ ಇಬ್ಬರೂ ಕೂತುಕೊಂಡು ಬಿಸಿ ಕಾಫಿ ಕುಡಿದರು. ''ನೀನೂ ನಿನ್ನ ಮಕ್ಕಳೂ ಊರ್ಮಿಳಾ ಸ್ನಾನ ಮಾಡ್ತಾ ಕೂತ್ಕೋಬೇಡಿ... ಚಕ ಚಕಾಂತ ಕೆಲ್ಸ ಮುಗ್ಸಿ ಬೇಗ್ನೇ ಬಂದ್ಬಿಡಿ... ನಿಮ್ಗೆ ಎರಡನೇ ಡೋಸಿಗೇಂತ ಇನ್ನಷ್ಟು ಕಾಫಿ ಫ್ಲಾಸ್ಕಿನಲ್ಲಿ ತುಂಬಿಸಿದೀನಿ'' ಹೂಬುಟ್ಟಿ ಹಿಡಿದ ಇನ್ನಕ್ಕ ಧಾವಂತದಿಂದ ಹೊಸ ಸೀರೆಯ ಸರಬರ ಸದ್ದಿನಲ್ಲಿ ಬಳಕುತ್ತ ಹೊರಟುಬಿಟ್ಟಳು. ''ನನ್ನ ಹೆಂಡ್ತಿ ಎಷ್ಟು ಚೆನ್ನಾಗಿ ಕಾಣ್ತಾ ಇದ್ದಾಳೆ ಇವತ್ತು... ನನ್ನ ದೃಷ್ಟೀನೇ ತಾಗಿಬಿಡುತ್ತೋ ಏನೋ?...'' ಕೀಟಲೆಯಿಂದ ಅಪ್ಪಣೆ ಕೊಡಿಸಿ, ಅವಳ ದುರುನೋಟಕ್ಕೆ ಕೈಕಟ್ಟಿ ಕಾದಿದ್ದು, ಅದು ಬಂದ ನಂತರ ಸುಧಾರಿಸಿಕೊಂಡಂತೆ ನಾಟಕವಾಡಿ ತುಂಟನಗೆ ಮಿಂಚಿಸಿ ಮಡದಿಯ ಹಿಂದೆ ಹಿಂದೆ ವಿಧೇಯರಾಗಿ ಹೊರಟರು ಗೋಪಣ್ಣ.

ಸಿದ್ಧಾರ್ಥ ಬಡಾವಣೆಯ ಒಂದು ಪ್ರಶಾಂತ ಮೂಲೆಯಲ್ಲಿ ಗೃಹಪ್ರವೇಶ ಅದರ ಪಾಡಿಗೆ ಅದು ನಡೆಯುತ್ತಿತ್ತು. ಎಷ್ಟು ಹುಡುಕಿದರೂ ರಜನಿಗಂತು ಯಾವ ಕೆಲಸವೂ ಕಾಣಲಿಲ್ಲ. ಅಕ್ಕನ ಹತ್ತಿರ ಹೋಗಿ ''ಒಂದ್ಸೆಜ್ಜೆ ಪ್ರೆಸ್ಸಿಗೆ ಹೋಗಿ ಬಂದು ಬಿಡ್ತೀನಿ ಕಣೇ ಅಕ್ಕಾ... ಇನ್ವಿಟೇಶನ್ ರೆಡಿಯಾಗಿರುತ್ತೆ...'' ಅಂದಳು. ಅಕ್ಕ ತಲೆ ಚಚ್ಚಿಕೊಂಡಳು. ''ಇದಕ್ಕೂ ನೀನೇ ಹೋಗಬೇಕೇ ಥೈ ಅಂತ? ಯಾರಾದ್ರೂ ಹುಡುಗ್ರನ್ನ ಕಳಿಸಿದ್ರೆ ಆಗೋಲ್ವೇ?'' ಅಕ್ಕ ಎಷ್ಟೇ ಆಪ್ತಳಾರೂ ಅವಳ ಕೋಪಕ್ಕೆ, ದುಃಖಕ್ಕೆ ರಜನಿ ಎಂದೂ ವಿಧೇಯಳೇ!

ಅಕ್ಕನಿಗೆ ಗೆಳತಿಯರು ಜಾಸ್ತಿ. ಅಕ್ಕನ ಗೆಳತಿಯರೆಲ್ಲರೂ ಗೋಪಣ್ಣನಿಗೂ ಗೆಳತಿಯರು ಎಂದು ಬೇರೆ ಹೇಳಬೇಕಾಗಿಲ್ಲ. ಗೋಪಣ್ಣನ ಪ್ರೀತಿಗೆ ಲಿಂಗಭೇದ

- ವಯೋ ಭೇದಗಳಿಲ್ಲ. ಮಕ್ಕಳೊಡನೆ ಮಗುವಾಗ, ಹೆಂಗೆಳೆಯರೊಡನೆ ಹೆಣ್ಣಾಗಿ, ವೃದ್ಧರೊಡನೆ ಪ್ರಬುದ್ಧರಾಗಿ ಪ್ರವರ್ತಿಸಿಬಿಡುವುದು ಅವರ ವ್ಯಕ್ತಿತ್ವದ ವಿಶೇಷ. ಹೀಗಾಗಿ ಈ ಗೆಳತಿಯರ ಚೆಲು ಹಿಂಡೇ - ಮಧ್ಯೆ ಮಧ್ಯೆ ಗೋಪಣ್ಣನನ್ನು ಯಥೇಚ್ಛಾಗಿ ಚುಡಾಯಿಸುತ್ತಾ ಕಾರ್ಯಕ್ರಮದ ಎಲ್ಲ ಕೆಲಸಗಳನ್ನು ಯಶಸ್ವಿಯಾಗಿ ಪೂರೈಸಿಬಿಟ್ಟಿತು. ರಜನಿಗೂ ಪುಷ್ಕಳ ಉಪಚಾರ ದೊರಕಿತು. ''ರಜನೀಕ್ಕಾ, ಅಪರೂಪಕ್ಕೆ ಬಂದಿದೀರಿ... ಕೂತುಕೊಳ್ಳಿ... ಸುಧಾರಿಸಿಕೊಳ್ಳಿ!'' ನಗೆಮೊಗದ ಮೆಲುದನಿಗಳು! ''ಸುಧಾರಿಸಿಕೊಂಡು ಸುಧಾರಿಸಿಕೊಂಡು ಸುಸ್ತಾಗಿ ಬಿಟ್ಟಿದೆ!'' ಅಂತ ನಕ್ಕಳು ಅವಳು... ಅಂತೂ ಗೃಹಪ್ರವೇಶ ಸಂಭ್ರಮ ಸಾಂಗವಾಗಿ ನೆರವೇರಿತು.

ಅವತ್ತೇ ಸಾಯಂಕಾಲ ಗೆಳತಿಯೊಬ್ಬಳಿಂದ ರಜನಿಗೆ ಫೋನ್ ಬಂತು.

''ಯಾವಾಗ ಬಂದದ್ದೇ ರಜನೀ?''

''ನಾಲ್ಕೈದು ದಿನಾನೇ ಆಯ್ತು ಕಣೇ...''

''ಅದೇನಪ್ಪಾ ಈ ಸಾರಿ ಇಷ್ಟೊಂದು ದಿನ ಉಳಿದು ಬಿಟ್ಟದ್ದು?''

''ಅಕ್ಕನ ಮನೆ ಗೃಹಪ್ರವೇಶ ಕಣೇ... ತುಂಬಾ ಕೆಲ್ಸ ಇರುತ್ತಲ್ವಾ?... ಅದಿಕ್ಕೇ ಮುಂಚೇನೇ ಬಂದುಬಿಟ್ಟೆ....''

''ಫಂಕ್ಷನ್ ಚೆನ್ನಾಗಿ ಆಯ್ತಾ?''

''ಓಹೋ... ತುಂಬ ಚೆನ್ನಾಗಿ ಆಯ್ತು.... ಕಾಶೀಹಲ್ವ ಅಂತೂ ತುಂಬ ಚೆನ್ನಾಗಿತ್ತು!''

''ಇನ್ನೂ ಸ್ವಲ್ಪ ದಿನ ಇರ್ತೀಯಾ ಹಾಗಾದ್ರೆ?''

''ಅಯ್ಯೋ ಇಲ್ಲಪ್ಪ!... ಬೆಂಗ್ಳೂರಲ್ಲಿ ತುಂಬಾ ಕೆಲ್ಸ ಇದೆ. ನಮ್ಮಕ್ಕಂಗೆ ಸಹಾಯ ಮಾಡೋಕೆ ಅಂತ ಬಂದಿದ್ದೇ... ಇನ್ನೇನು, ಎಲ್ಲ ಆಯ್ತಲ್ಲ?''

ಫೋನಿಟ್ಟು ತಿರುಗಿ ನೋಡಿದರೆ, ಉಸ್ಸೆಂದು ಗೋಡೆಗೊರಗಿ ಕಾಲುಚಾಚಿ ಕೂತಿದ್ದ ಅಕ್ಕ-ಭಾವ ಇಬ್ಬರೂ ಇವಳನ್ನೇ ನೋಡುತ್ತಾ ನಗುತ್ತಿದ್ದಾರೆ!

ಯಾಕೋ ಏನೋ... ಇದ್ದಕ್ಕಿದ್ದಂತೆ... ಹೃದಯದಲ್ಲೇನೋ ಅಲುಗಾಡಿದಂತಾಗಿ ಕಣ್ಣು ಮಂಜಾಯಿತು. ಆ ಮಸುಕು ನೋಟದಲ್ಲಿ, ಅವರಿಬ್ಬರ ವಾತ್ಸಲ್ಯಪೂರ್ಣ ಮುಖಭಾವಗಳಲ್ಲಿ ಹಾದು ಹೋಗುತ್ತಿರುವ ನಗೆ ನೆರಳು ಯಾವುದು?.... ಯಾವುದದು?

# ಮನೆ - ಮನೆಗೆ ಸರಸ್ವತಿ!

– ಟಿ.ಎಸ್. ಅಂಬುಜಾ

ಮೊನ್ನೆ 'ಶಾರದಾಪೂಜೆ' ಆಚರಣೆಯ ಕುರಿತು ಕರೆಯಲಾದ ನಮ್ಮ ಲೇಖಕ ಸಂಘದ ಮೀಟಿಂಗ್‌ನಲ್ಲಿ, ಹೊಸ ಸದಸ್ಯರೊಬ್ಬವ ವಿಶೇಷ ಸಲಹೆಯೊಂದು ಎಲ್ಲರ ತಲೆದೂಗಿಸಿತು. ಅವರೇನೋ ಇತ್ತೀಚೆಗೆ ನಮ್ಮಲ್ಲಿ ಹೆಸರು ನೋಂದಾಯಿದ್ದರಾಗಿ, ಈ 'ಹೊಸ' ಎಂಬ ವಿಶೇಷಣವಲ್ಲದೇ, ಆತ ಈ ಕಂಪ್ಯೂಟರ್ ಯುಗದ ಯುವಕನೆಂದೇನೂ ಅಲ್ಲ. ಆದ್ದರಿಂದ ಈ ಬೋಳು ತಲೆಯ ತಾತನಿಗೆ ಹೊಳೆದ ಉಪಾಯ, ಈ ವರೆಗೂ ನಮಗ್ಯಾರಿಗೂ ಕ್ಲಿಕ್ ಆಗಿರಲಿಲ್ಲವಲ್ಲ ಎಂದು ನಾವೆಲ್ಲರೂ ಬೆರಳು ಕಚ್ಚುವವರೇ.

ಆ ಐಡಿಯಾ ಏನೆಂದರೆ... ಈ ಬಾರಿ ಸರಸ್ವತಿಗೆ, ಸಂಘದ ಕೋಣೆಯೊಳಗಿನ ಜೈಲಿನಂತಹ ಪೂಜೆಯಲ್ಲ. ನಿಜವಾದ ಅರ್ಥದಲ್ಲಿ 'ಸ್ವಾತಂತ್ರ್ಯ'ದ ಅನುಭವವನ್ನು ಆಕೆಗೆ ನೀಡುವ ಒಂದು ಪರಿ! ಅರ್ಥಾತ್, ಪುಸ್ತಕ ರೂಪೀ ಶಾರದೆಯನ್ನು ಊರ ಮನೆ ಮನೆಗಳಿಗೆ ಹೊತ್ತೊಯ್ದು, ಪ್ರದರ್ಶಿಸಿ, ಆಯಾ ಗೃಹಸ್ಥ - ಗೃಹಿಣಿಯರು ಆರಿಸಿದ ಕೃತಿಗಳನ್ನೇ ಪ್ರಸಾದವೆಂದಬಂತೆ ನೀಡಿ, ಪ್ರತಿಯಾಗಿ ಕಾಣಿಕೆ ಸ್ವೀಕರಿಸುವ ಒಂದು ನೂತನ ಆರಾಧನಾ ಶೈಲಿ! ಒಂದೇ ಕಲ್ಲಿಗೆ ಎರಡು ಹಣ್ಣುದುರಿಸಿದ ಹಾಗೆ. ಪೂಜೆಯೂ ಆದಂತಾಯ್ತು. ನಮ್ಮ ಸಂಘದ ಪ್ರಕಟಣೆಗಳಿಂದ ತುಂಬಿತುಳುಕುತ್ತಿರುವ ಕೋಣೆಯ ಅಟ್ಟವೂ ತುಸು ತೂಕ ಕಳೆದುಕೊಂಡಂತಾಯ್ತು!

ಈ ಯೋಜನೆಗೆ 'ಮನೆ ಮನೆಗೆ ಸರಸ್ವತಿ' ಎಂಬ ಆಕರ್ಷಕ ಹೆಸರನ್ನಾರಿಸುವುದು, ಬರಹಗಾರ - ಗಾರತಿಯರಾದ ಸದಸ್ಯರುಗಳಿಗೆ ಏನೂ ಪರಿಶ್ರಮದ ಕೆಲಸವೆನಿಸಲಿಲ್ಲವೆನ್ನಿ. ಮೊದಲ ಹೆಜ್ಜೆಯಾಗಿ, ನಾಲ್ಕಾರು ಮಾರ್ಕೆಟಿಂಗ್ ಎಕ್ಸ್‌ಪರ್ಟ್‌ಗಳನ್ನು ತುರ್ತು ಸಂದರ್ಶನ ನಡೆಸಿ ಆರಿಸಲಾಯ್ತು. ವ್ಯಾಪಾರ ಸಂಬಂಧಿತ ಉದ್ದುದ್ದದ ಡಿಗ್ರಿಗಳನ್ನು ಹೊಂದಿದ್ದ ಈ ತರುಣ-ತರುಣಿಯರು, ಇವರ ಸಾಮಗ್ರಿಗಳ 'ಡೋರ್‌ಟುಡೋರ್' ಮಾರಾಟದಲ್ಲಿ ಸಿದ್ಧಹಸ್ತರೆನಿಸಿ ಯಶಸ್ವಿಯಾಗಿದ್ದ ಮಹಾ - ಅನುಭವಿಗಳು ಬೇರೆ! ಅವರಿಗೆ ತರಬೇತಿ ಎಂಬಂತೆ, ನಾವು ನಾವೇ ಖುದ್ದಾಗಿ ನಂ-ನಮ್ಮ ಪುಸ್ತಕಗಳ ಉದ್ದ- ಅಗಲ ಆಳಗಳನ್ನು ಪ್ರತಿಯೊಬ್ಬ ಸದಸ್ಯ ಸದಸ್ಯೆಯರೂ ವಿವರಿಸಿ

ಹೇಳಿದ್ದಾಯ್ತು. ಅಂದು ವಿದ್ಯಾದಶಮಿಯ ರಜಾ ದಿನದ ಶುಭ ಮುಹೂರ್ತದಲ್ಲೇ, ಇವರನ್ನೆಲ್ಲ, ಜತೆಗೆ ದೊಡ್ಡ ದೊಡ್ಡ ಕೈಚೀಲಗಳಲ್ಲಿ 'ಸರಸ್ವತಿ'ಯನ್ನು ತುಂಬಿ, ಊರಿನ ಬೇರೆ ಬೇರೆ ಕಾಲನಿಗಳಿಗೆ ಕಳಿಸಲಾಯ್ತು.

ಅದು ಸಂಜೆಗೇ ಸಂಘದ ತುರ್ತು ಸಭೆ ಕರೆಯಲಾಗಿತ್ತು. ಯಾಕೆಂದರೆ, ಎಲ್ಲರಿಗೂ ಕುತೂಹಲ.- ಯಾರ - ಯಾವ ಕೃತಿಗಳು ಹೆಚ್ಚು ಮರಾಟವಾಗಿರಬಹುದು? ಚಿನ್ನದ ಹೂವಿಗೆ ಪರಿಮಳ ಬಂದಂತಹ ಈ ಏರ್ಪಾಡಿನ ಬಗ್ಗೆ ಏನೋ ಖುಷಿ. ಮೊದಲೇ ತಂ-ತಮ್ಮ ಸಾಹಿತ್ಯ ಉತ್ಪನ್ನಗಳ ಬಗ್ಗೆ ಹೇಗೂ ಎಲ್ಲರಿಗೂ ಹೆಮ್ಮೆ. ಅದರ ಜತೆಗೀಗ, ಅವು ಅತ್ಯುತ್ತಮ ವ್ಯಾಪಾರೀ ಕೌಶಲಕ್ಕೊಳಗಾಗಿ ಓದುಗರ ಕೈ ತಲುಪಿವೆಯಲ್ಲ?

ನಮ್ಮ ನಿರೀಕ್ಷೆಯ ವೇಳೆಗಿಂತ ಮುಂಚಿತವಾಗಿಯೇ ಒಬ್ಬೊಬ್ಬರಾಗಿ ಅವರೆಲ್ಲ ಬಂದು ತಲುಪಿದರು. ಎಲ್ಲರದೂ ಉಳಲು ಹೋದ ಎತ್ತಿನ ಮುಖ! ಅಂದರೆ ತಮ್ಮ ನೈಪುಣ್ಯದ ಬಗೆಗಿನ ಜಂಭವೆಲ್ಲ ಸೋರಿ ಹೋಗಿ, ಸೋಲು ಎದ್ದು ಕಾಣುವ ಸಪ್ಪೆ ಮೊಗ!

ಒಬ್ಬೊಬ್ಬರದೂ ಒಂದೊಂದು ಅನುಭವ. ಪರಾಭವದ ಸಾಲು ಸಾಲು ನಿರೂಪಣೆಗಳೇ!

ವಿಷಯವೇನೆಂದರೆ, ನಮ್ಮೂರೇನೂ ಅಂಥಾ ಬೃಹತ್‌ನಗರವಲ್ಲವಾದುದಕ್ಕೋ ಏನೋ, ನಮ್ಮ ಸಂಘದ ಮೆಂಬರುಗಳೆಲ್ಲಾ ಊರಿನಲ್ಲಿ ಹೆಚ್ಚಿನವರಿಗೆ ಪರಿಚಿತರೇ. ಹಾಗಾಗಿ ಪುಸ್ತಕ ಕೊಳ್ಳದಿರಲು ಈ ರೀತಿಯ ನಾನಾ ನೆವಗಳು. ''ಓ! ಇವ್ರು ನನ್ಗೆ ಯಾವಾಗ್ಲೂ ಸಂತೆಯಲ್ಲಿ ಸಿಕ್ತಿರ್ತಾರೆ, ನಾನು ಬೇಕಾದ್ರೆ ಅವ್ರತ್ರವೇ ಕೇಳಿ ತೆಕೊಂಡೇನು. ಈಗ ಬೇಡ'' ಪುಸ್ತಕದಲ್ಲಿದ್ದ ಫೋಟೋ ಕಂಡು ಎಂದರಂತೆ, ಒಬ್ಬರು! ''ಛೆ! ಇವ್ರ ಈ ಎಲ್ಲ ಲೇಖನಗಳನ್ನ ನಾನು ಪತ್ರಿಕೆಗಳಲ್ಲಿ ಓದಿಯಾಗಿದೆಯಲ್ಲ? ಮತ್ಯಾಕೆ ಈಗ?'' ಎಂದು ಪುಸ್ತಕದ ಪುಟ ಮಗುಚಿ ನೋಡಿ ನಕರಾರ ಸೂಚಿಸಿದರಂತೆ ಇನ್ನೊಬ್ಬರು! (ನಮಗೂ ಫ್ಯಾನ್‌ಗಳಿದ್ದಾರೆ. ಆಹಾ! ಎಂಥಾ ಭಾಗ್ಯವಯ್ಯಾ!)

ಮತ್ತೆ ಕೆಲವರದಂತೂ, ನಮ್ಮೆಲ್ಲರ ವೈಯಕ್ತಿಕ ವಿಷಯ ಸಂಗ್ರಹದ ಭಂಡಾರವಂತೆ.....'' ''ಇವ್ರ ಹಸ್ಬೆಂಡ್ ನಮ್ಮ ಆಫೀಸಲ್ಲೇ ಅಲ್ವಾ ಇರೋದು?'' ''ಇವ್ರ ಮಿಸೆಸ್ ನಮ್ಮ ಮಗಳ ಟೀಚರ್'' ''ಇವ್ರ ಮಗ, ನನ್ನ ಮಗನ ಫ್ರೆಂಡ್'' ಎಂಬಿತ್ಯಾದಿ ಆತ್ಮೀಯತೆ, ಸಲುಗೆಯ ಪ್ರದರ್ಶನದ ನಂತರ, ಯಥಾಪ್ರಕಾರ, 'ಬೇಕಾದ್ರೆ, ಅವರ್ತ್ಯಾರತ್ರ ಹೇಳಿ ಕಳಿಸಿ ತರಿಸಿಕೊಂಡರಾಯ್ತು. ಅಷ್ಟು ಸುಲಭದಲ್ಲಿ

ಸಿಕ್ತದೆ ಅಂತಾಂದ್ಮೇಲೆ, ಯಾಕೆ ಈಗ್ಲೇ ತೆಕೊಳ್ಬೇಕು?' ಎಂದು ಸವಾಲೆಸೆದವರು ಹಲವರು! (ನಾವೂ ಬರಬರುತ್ತ ಸಿನಿಮಾ ತಾರೆಯರಂತೆ ಜನಪ್ರಿಯರಾಗುತ್ತಿದ್ದೇವೆ! ಜನ ತಮ್ಮ ಕೌಟುಂಬಿಕ ಬದುಕಿನತ್ತ ಕಣ್ಣು ಹಾಯಿಸಲಾರಂಭಿಸಿದೆ!)

ಇನ್ನು ಕೆಲವರಿಗೆ ತಮ್ಮ ಪರಿಚಯವಿರದ್ದಿರೂ, 'ಹಿತ್ತಲ ಗಿಡ ಮದ್ದಲ್ಲ ಎಂಬ ಭಾವನೆ' ಅಯ್ಯೋ! ಲೈಬ್ರರಿಯಿಂದ ತಂದ ಆ ಒಳ್ಳೊಳ್ಳೇ (!) ಪುಸ್ತಕಗಳನ್ನೇ ನಮಗ್ಗೆ ಓದ್ಲಿಕ್ಕೆ ಟ್ಯಾಮ್ ಇಲ್ದೆ, ಡ್ಯೂಡೇಟ್ ಆದ್ಮೂಡ್ಲೆ ಹಾಗೇ ಹಿಂದಿರುಗಿಸ್ಬೇಕಾಗಿರುವಾಗ, ಈ ಲೋಕಲ್ ರೈಟರ್ಸ್‌ಗಳ ಇಂತಹ ಪುಸ್ತಕಗಳನ್ನೆಲ್ಲ ಯಾಕೆ? ಅದೂ, ಕೊಂಡ್ಕೊಂಡ್ ಓದ್ಬೇಕಪ್ಪಾ?' ಎನ್ನುವ ಲಾ ಪಾಯಿಂಟ್ ಅವರದು! ಈ ಎಲ್ಲ ಪುಸ್ತಕಗಳೂ ಲೈಬ್ರರಿಯಲ್ಲಿ ಇವೆ ಎಂಬುದು, ಬಹುಶಃ ಅವರಿಗೆ ಗೊತ್ತಿಲ್ಲವೇನೋ? (ಆದ್ದರಿಂದ 'ಓ ದೇವರೇ, ಅವರೇನನ್ನುತ್ತಿರುವರೆಂದು ಅವರೇ ತಿಳಿಯರು. ಅವರನ್ನು ಕ್ಷಮಿಸು' ಎಂದು ಮೊರೆಯಿಡುವುದೊಂದೇ ನಮಗೆ ಉಳಿದ ದಾರಿ!)

ಹಲವರಿಗೆ, ಅಸ್ತಿತ್ವಕ್ಕೆ ಬಂದ ಎಲ್ಲ ಟಿ.ವಿ. ಚಾನೆಲ್‌ಗಳನ್ನು ಒಮ್ಮೆಯಾದರೂ ನೋಡಲು ಇನ್ನೂ ಪುರುಸೊತ್ತಾಗಿಲ್ಲ ಎನ್ನುವಾಗ, ಈ ಹಳೆಯ ಕಾಲದ 'ಓದುವ' ಸಂಸ್ಕೃತಿಯತ್ತ ವಾಲಲು ಸಮಯವೆಲ್ಲಿದ್ದೀತು? ಒಟ್ಟಾರೆ, ಈ ಎಲ್ಲಾ ಕಮೆಂಟ್ಸ್‌ಗಳ ಫಲಿತಾಂಶ ಮತ್ತು ಅಂದಿನ ಅವರ ಪುಸ್ತಕ ಮಾರಾಟದ ಉತ್ತರ ಒಂದೇ. ಅದೇ ಸೊನ್ನೆ!

ತಮ್ಮ ವ್ಯವಹಾರ ನೈಪುಣ್ಯದಲ್ಲಿ ಬಹಳಷ್ಟು ನಂಬಿಕೆ ಇಟ್ಟಿದ್ದ ಆ ಪರಾಕ್ರಮಿಗಳೂ, ಹೆದರಿ ಹಿಮ್ಮೆಟ್ಟಿ ಮೆರಳುವ ಮುನ್ನ, ನಮಗೊಂದು ಕಿವಿಮಾತಿನ ಸಲಹೆಯನ್ನಿತ್ತರು ''ಬಹುಶಃ ನೀವು ನೀವೇ ಹೋದ್ರೆ, ಎಲ್ಲರೂ ದಾಕ್ಷಿಣ್ಯಕ್ಕಾದ್ರೂ ನಿಮ್ಮ ಪುಸ್ತಕಗಳನ್ನು ಕೊಂಡಾರು, ಯಾಕೆಂದ್ರೆ, ನಿಮ್ಮೆಲ್ಲರ ಬಗ್ಗೆ ಇಡೀ ಊರಲ್ಲಿ ಬಹಳ ಅಭಿಮಾನವಿದೆ ಅಂತ ನಮ್ಗೆ ಅವ್ರಮಾತಿನಿಂದಲೇ ಗೊತ್ತಾಗಿದೆ''

ಕೊನೆಗೂ, ನಾವೆಲ್ಲ ಮತ್ತೊಮ್ಮೆ ಚರ್ಚಿಸಿ, ಮುಂದಿನ ಭಾನುವಾರ ಆ ಎಲ್ಲ ಪುಸ್ತಕಗಳೊಂದಿಗೆ, ಖುದ್ದಾಗಿ ನಾವೇ 'ಮನೆ ಮನೆಗೆ ಸರಸ್ವತಿ' ಕಾರ್ಯಕ್ರಮವನ್ನು ನಡೆಸುವುದುದೆಂದು ನಿಶ್ಚಯಿಸದೆವು. ಒಂದೇ ದಿನದಲ್ಲಿ ಊರಿನ ಬೀದಿಗಳಲ್ಲೆಲ್ಲ ಕಾರ್ಯಕ್ರಮವನ್ನು ಅನುಷ್ಠಾನಿಸುವುದು ಅಸಾಧ್ಯವಾದ್ದರಿಂದ, ಪ್ರಮುಖವಾದ ಎರಡು ಕಾಲನಿಗಳನ್ನು ಆರಿಸಿಕೊಳ್ಳಲಾಯ್ತು, ಬೆಳಿಗ್ಗೆ ಹತ್ತರಿಂದ ಒಂದರವರೆಗೆ 'ಎ' ಕಾಲನಿ, ಮಧ್ಯಾಹ್ನ

ಉಂಡ ಬಳಿಕ ಎರಡರಿಂದ ಐದರವರೆಗೆ 'ಬಿ' ಕಾಲನಿಗೆ ಭೇಟಿ ನೀಡುವುದೆಂದಾಯ್ತು. ಜನರಿಗೆ ಮೊದಲೇ ಈ ವಿಚಾರ ತಿಳಿದಿದ್ದರೆ, ಅವರು ಪೂರ್ವಭಾವಿಯಾಗಿ ಚಿಂತಿಸಿ, ಅವರು ಕೊಳ್ಳಬೇಕೆಂದಿರುವ ಕೃತಿ - ಅದಕ್ಕೆ ನೀಡಬೇಕಾಗುವ 'ಕಾಣಿಕೆ' ಗಳ ಸಿದ್ಧತೆ ಮಾಡಿಕೊಳ್ಳಲು ಅನುಕೂಲವೆಂಬ ಸದಸ್ಯರೊಬ್ಬರ ಸಲಹೆಯಂತೇ, ಸ್ಥಳೀಯ ಪತ್ರಿಕೆಯಲ್ಲಿ, ಜನರಿಗೆ ತಮ್ಮ ಮನೆ ಮನೆಗೆ ಬರಲಿರುವ ಈ ಶಾರದ 'ಮೆರವಣಿಗೆ'ಯ ಸಂಪೂರ್ಣ ವಿವರವನ್ನೂ ನೀಡಲಾಯ್ತು. ಇತರ ಸಣ್ಣ ಪುಟ್ಟ ಬೀದಿಗಳವೂ, ತಮಗೆ ಸಮೀಪವಿರುವ ಸ್ಥಳಗಳಲ್ಲಿ ಹಾಜರಿರಬೇಕೆಂದು ವಿನಂತಿಸಲಾಯ್ತು.

ಮುಖ್ಯ ರಸ್ತೆಯಲ್ಲಿ ಮಟಡೋರ್‌ನ್ನು ನಿಲ್ಲಿಸಿ ನಾವು ಹತ್ತಾರು ಮಂದಿ, ಕರಗಳಲ್ಲಿ 'ಸರಸ್ವತಿ'ಯನ್ನು ಅಮಿಕಿ ಹಿಡಿದುಕೊಂಡು, ಒಂದು ಮನೆಯ ಕರೆಗಂಟೆಯನ್ನೊತ್ತಿದ್ದೇ ತಡ, ನಾಯಿಯೊಂದು ಪಕ್ಕದಿಂದ ಆರ್ಭಟಿಸಿತ್ತು. ಸಧ್ಯ! ಅದನ್ನೊಂದು ಪುಟ್ಟ ಮನೆಯಂತಹ ಗೂಡಿನಲ್ಲಿ ಬಂಧಿಸಲಾಗಿತ್ತು. ಆ ಧೈರ್ಯದಿಂದ ನಾವು ಮತ್ತೆ ಮತ್ತೆ ಘಂಟನಾದ ಮಾಡಿಸಿದರೂ ಉತ್ತರವೇ ಇಲ್ಲ, ಹೌದು. ಮನೆಯಲ್ಲಿ ಯಾರೂ ಇರಲಿಲ್ಲ!

ಮುಂದೆ ಒಂದು - ಎರಡು-ಮೂರು ಹೀಗೆ ಸಂಖ್ಯೆ ಹದಿನೈದರವರೆಗೆ ತಲುಪಿದರೂ, ಯಾವ ಮನೆಯಲ್ಲೂ ಮನುಷ್ಯ ಸಂತಾನವೇ ಇರದು. ಕೇಳಿಸುತ್ತಿದ್ದುದು ಕೇವಲ ಸ್ವಾನಗಳ 'ಭೌ'ಕಾರ ಮಾತ್ರ!

ಭಾನುವಾರವಾದರೂ, ಈ ಕುಟುಂಬಗಳೆಲ್ಲ ಎಲ್ಲಿ ಹೋಗಿದ್ದಾವಪ್ಪ? ಪ್ರಾಯಶಃ ವಾರಾಂತ್ಯದ 'ಗಮ್ಮತ್ತಿನ' ಆಚರಣೆಯೇನೋ? ಆದರೂ, ನಾವು ನಿರಾಶರಾಗದೇ, ಜನಗಣತಿಯ ಶಿಕ್ಷಕಿಯರಂತೇ, ಪ್ರತಿ ಮನೆ ಮನೆಯ ಕದ ತಟ್ಟುವುದನ್ನು ಬಿಡಲಿಲ್ಲ. ಕೊನೆಗೂ ಒಂದು ಬಾಗಿಲು ತೆರೆಯಿತೆಂದಾಯ್ತು ನೋಡಿದರೆ, ಅಡಗೂಲಜ್ಜಿಯ ಕತೆಯಲ್ಲಿಯ ಪಾತ್ರದಂತಹ ಒಂದು ಮುದುಕಿ ಹೊರಗಿಣುಕಿತು. ಮನೆಯಾಗಿ ನಾನೊಬ್ಬಳೇ ಎಂದಾಗ, ಕುತೂಹಲದಿಂದ ನಾನು ವಿಚಾರಿಸಿದೆ. ತಮ್ಮ ಮನೆಯವರೆಲ್ಲ 'ಬಿ' ಕಾಲನಿಯಲ್ಲಿರುವ ತಮ್ಮ ನೆಂಟರ ಮನೆಗೆ ಹೋಗಿರುವರೆಂದರು ವೃದ್ಧೆ.

ಮುಂದೊಂದು ದಿನ, ಸೇಲ್ಸ್ ಮ್ಯಾನ್‌ಗಳೂ ಅಪಾಯಿಂಟ್‌ಮೆಂಟ್ ತೆಗೆದುಕೊಂಡೇ ಗೃಹ ಸಂದರ್ಶನ ನೀಡಬೇಕಾದೀತಪ್ಪ ಎಂದೆಲ್ಲ ನಾವು ಮಾತಾಡಿಕೊಂಡೆವು.

ಮಧ್ಯಾಹ್ನ ಇನ್ನೊಂದು ಏರಿಯಾಗಿಕ್ಕೆ ತಲುಪಿದ್ದಾಯ್ತು. ಅರೆ! ಇಲ್ಲೂ ಇದೇ ಕತೆ. ಮನೆ ಮನೆಗೂ ಬೀಗವೇ. ಛೆ! ನಾವು ಪೇಪರ್ ಹೇಳಿಕೆ ನೀಡಿಯೂ

ಪ್ರಯೋಜನವಾಗಲಿಲ್ಲವಲ್ಲ! ನಮಗೆ ಆದರದ ಸ್ವಾಗತ ಸಿಕ್ಕೀತೆಂಬ ನಿರೀಕ್ಷೆಯಲ್ಲಿದ್ದ ನಮ್ಮನ್ನು ಮುಚ್ಚಿದ ಬಾಗಿಲುಗಳು ಭ್ರಮ ನಿರಸನಗೊಳಿಸಿದುವು. ಹದಿನಾಲ್ಕನೆ ಮನೆಯ ಜಗುಲಿಯಲ್ಲಿ ಆಟವಾಡುತ್ತಿದ್ದ ಪುಟ್ಟ ಬಾಲಕನನ್ನು ಕೇಳಿದರೆ, ನಿರಾಳವಾಗಿ ಹೇಳಿದ... 'ಅಪ್ಪ - ಅಮ್ಮ ಅಂಕಲ್ ಮನೆಗೆ ಹೋಗಿದ್ದಾರೆ' ನನಗ್ಯಾಕೋ ಸಂದೇಹ. ಆತುರದಿಂದ ಕೇಳಿದೆ. 'ಎಲ್ಲಿದೆ ಆ ಅಂಕಲ್ ಮನೆ?' ''ಅದು 'ಎ' ಕಾಲನಿಲಿದೆ. ಅವ್ರೆಲ್ಲ ಬೆಳಿಗ್ಗೆ ನಮ್ಮನೆಗೆ ಬಂದಿದ್ರು. ಈಗ ಹೋಗ್ತಾ ಅಮ್ಮ-ಅಪ್ಪನ್ನ ಕರ್ಕೊಂಡೋದ್ರು ಐದು ಗಂಟೆಗೆಲ್ಲ ಹಿಂದೆ ಬಂದ್ಬಿಡ್ತಾರೆ.''

ಸ್ಪಷ್ಟವಾದ 'ಕ್ಲೂ' ಇಲ್ಲಿತ್ತು. ಪತ್ರಿಕೆಯಲ್ಲಿ ವಿಷಯ ತಿಳಿದ; 'ಎ' ಮತ್ತು 'ಬಿ' ಕಾಲನಿಯವರು, ನಮ್ಮ ಮುಖದೆದುರು 'ಬೇಡ' ಎನ್ನುವ ಗಟ್ಟಿತನವನ್ನು ಉಳಿಸಿಕೊಳ್ಳಲಾಗದ ತಮ್ಮ ಅಸಹಾಯಕತೆಯ ಬಗ್ಗೆ ಪರಸ್ಪರ ಮಾತಾಡಿಕೊಂಡು, ಈ ವ್ಯವಸ್ಥೆ ಮಾಡಿಕೊಂಡಿದ್ದರು. ಬೆಳಗ್ಗೆ 'ಎ' ಕಾಲನಿಯವರೆಲ್ಲ 'ಬಿ' ಕಾಲನಿಯ ಬಂಧುಗಳಲ್ಲಿ! ಮಧ್ಯಾಹ್ನ ಇವರು ಅವರ ಮನೆಗಳಲ್ಲಿ! ಅಂತೂ ಸರಸ್ವತಿ ಮನೆ ಮನೆಗೆ ಸಂದರ್ಶನ ನೀಡಿದ್ದೇ ಬಂತು!

★★★

## ದೃಶ್ಯ

ನಗರದಲ್ಲಿ ಸಂಜೆ
ಮೇಲೆ ನೋಡಿದರೆ
ಕಾಣಿಸುವುದೇನು?
ರಾಗರತಿಯ
ನಂಜೇರಿದ ಮುಗಿಲೆ?
ದೇವರ ರುಜುವಿನಂಥ
ಬೆಳ್ಳಕ್ಕಿ ಸಾಲೆ?
ಯಾವುದೂ ಅಲ್ಲ
ದಿನಬಳಕೆ
ವಸ್ತುಗಳ ಬೆಲೆ!

- ಹೆಚ್. ಡುಂಡಿರಾಜ್

# ಬುದ್ಧಿ ಜೀವಿಗಳ ಸಾಹಿತ್ಯ!

– ಕುಮುದಾ ಪುರುಷೋತ್ತಮ್

ಮಾವಯ್ಯ ಸುಮಾರು ಹೊತ್ತಿನಿಂದ ಕಾಫಿಗಾಗಿ ಚಡಪಡಿಸುತ್ತಿದ್ದರು. ಅತ್ತಿಂದಿತ್ತ ಇತ್ತಿಂದತ್ತ ಓಡಾಡಿ ಕಾಫಿ ದಾಹದ ಜೊತೆಗೆ ಕಾಲುನೋವೂ ಸೇರಿತೇ ಹೊರತು ಯಾವುದೋ ಪತ್ರಿಕೆಯಲ್ಲಿ ಬಂದ ಕಥೆ ಓದುತ್ತಾ ಕುಳಿತಿದ್ದ ಪಾಪತ್ತೆ ಕೇಳಿದರೆ 'ಒಂದ್ನಿಮಿಷ, ಈ ಕತೆ ಮುಗಿಸಿ ಬರುತ್ತೇನೆ' ಎಂದವರು ಒಂದು ನಿಮಿಷ ಮೂವತ್ತಕ್ಕೇರಿ ಮುಕ್ಕಾಲು ಗಂಟೆಯಾದರು ಅದೇ ಕಥೆಯನ್ನು ಪದೇ ಪದೇ ಓದುತ್ತಲೇ ಹೋದರು. ಪರಂಪರಾನ್ವಯ ನಮ್ಮ ಸಮಾಜದಲ್ಲಿ ಪತಿ ದೇವರುಗಳನ್ನು ದೈವತ್ವಕ್ಕೇರಿಸಿದ ಮಾತ್ರಕ್ಕೆ ಅವರಿಗೆ ಕೋಪ ಬರದೇ ಇದ್ದೀತೆ? ಮಾವನಿಗೂ ಬಂದೇ ಬಂತು. ''ನಾನು ಅಷ್ಟು ಹೊತ್ತಿಂದ ಗಮನಿಸುತ್ತಾನೇ ಇದ್ದೀನಿ. ಓದಿದ ಕಥೆಯನ್ನೇ ಓದುತ್ತಿದ್ದೀ. ಅದೇ ಪಾರಾಯಣ ಮಾಡುವಂತಹ ರಾಮಾಯಣವೇ ಅಥ್ವಾ ಅಷ್ಟೊಂದು ಚಂದದ ಕಥೆಯೇ?''

''ಅಂದ ಚಂದ ಇರ್ಲಿ, ಅದೇನು ಅಂತಾನೇ ಗೊತ್ತಾಗ್ತಾ ಇಲ್ಲ. ಕಥಾ ಸ್ಪರ್ಧೆಯಲ್ಲಿ ಮೊದಲನೆಯ ಬಹುಮಾನ ಬಂದಿದೆ. ವಿಮರ್ಶಕರಿಂದ ಅಪಾರ ಮೆಚ್ಚುಗೆ ಗಳಿಸಿದೆ. ನನಗೆ ಮಾತ್ರ ಮೂರು ನಾಲ್ಕು ಬಾರಿ ಓದಿದ್ರೂ ಇದರ ತಲೆ ಬುಡ ಒಂದೂ ಅರ್ಥವಾಗ್ತಾ ಇಲ್ಲ. ನಿಮಗೇನಾದ್ರೂ ಅರ್ಥವಾಗುತ್ತೇಂತ ಓದಿನೋಡಿ'' ಪುಸ್ತಕ ಕೊಟ್ಟು ಕಾಫಿಗೆ ನೀರಿಡಲು ಎದ್ದು ಹೋದರು.

ಹಬೆಯಾಡುವ ಫಿಲ್ಟರ್ ಕಾಫಿಯೊಡನೆ ಹೊರಬಂದಾಗ ಮಾವಯ್ಯ ಸ್ವತಃ ಪ್ರಶ್ನಾರ್ಥಕ ಚಿನ್ಹೆಯಾಗಿ ಕುಳಿತಿದ್ರು! ಒಂದೆರಡು ಗುಟುಕು ಕಾಫಿ ಒಳ ಹೊಕ್ಕೊಡನೆ ಬಾಯಿಂದ ಮಾತು ಹೊರಟಿತು. ''ಈ ಕಥೆ ಯಾರ ಬಗ್ಗೆ ಯಾವುದರ ಬಗ್ಗೆ ಏತಕ್ಕೆ ಏನು ಹೇಳ್ತಿದೆ ಅಂತ ಗೊತ್ತಾಗ್ತಾ ಇಲ್ಲ. ಎಲ್ಲ ಗೋಜಲು ಗೋಜಲು'' ಪಾಪತ್ತೆಗೆ ಈಗ ತುಸು ಸಮಾಧಾನ. ಅಜ್ಞಾನಿ ತಾನೊಬ್ಬಳೇ ಅಲ್ಲ. ತನ್ನದೇ ಬುದ್ಧಿಮಟ್ಟದ ಯಜಮಾನರೂ ಇದ್ದಾರೆ.

''ಅಲ್ರೀ, ಕಥೆ ನಡೆದದ್ದು ಭೂತದಲ್ಲೋ, ವರ್ತಮಾನದಲ್ಲೋ ಅಥವಾ ಭವಿಷ್ಯತ್ತಿನಲ್ಲೋ ಗೊತ್ತಾಗ್ತಿಲ್ಲ ಅಲ್ವೇ?

''ಇದಕ್ಕೆ ಕಾಲಾತೀತ ಅಂತಾರೆ.''

''ಕಾಲ ಬೇಡ ಬಿಡಿ. ವಸ್ತು ಏನೂಂತ ತಿಳಿಯೋದು ಬೇಡ್ವೇ? ಮೊದಲು ಹದ್ದುಗಳ ಬಗ್ಗೆ ಅನ್ನಿಸಿತ್ತು. ತರುವಾಯ ಹಂದಿಗಳು, ದುಃಸ್ವಪ್ನಗಳ ಸಂಕೇತ

ಅಂದ್ಕೊಂಡೆ. ಆಮೇಲೆ ಹತ್ಯಾಕಾಂಡ, ರಕ್ತಪಾತ, ತರುವಾಯ ಗರ್ಭಪಾತದ ಭೀಕರತೆ ಅಂತ ಕಾಣಿಸ್ತು. ಮುಂದೆ ಮಂತ್ರಶಾಸ್ತ್ರ, ಪಾಕಶಾಸ್ತ್ರ, ಆಧ್ಯಾತ್ಮ ಎಲ್ಲಾ ಕ್ಯೂಕಟ್ಟಿ ನಿಂತು ನಮ್ಮ ಮುಂದೆ ಮೆರೆದವೇ ವಿನಹ ಕಥೆಯ ವಸ್ತುವೇನು ಅಂತ ತಿಳೀಲೇ ಇಲ್ಲ''

''ಅದು ವಿಷಯಾತೀತ ಅಂತ ಅಲ್ಲಿಗೆ ಬಿಟ್ಟುಬಿಡು.''

''ಸರಿ, ಬಿಟ್ಟೆ, ಆದ್ರೆ ವ್ಯಾಕರಣ ಸೂತ್ರ, ವಾಕ್ಯರಚನೆ ನಿಯಮ ಯಾವುದಕ್ಕೂ ಅನುಗುಣವಾಗಿಲ್ದೆ ಇದ್ರೆ ಹೇಗೆ? ಶಾಲೆಯಲ್ಲಿ ಇಂತಹ ಬರಹ ಕೊಟ್ಟಿದ್ರೆ ಪರೀಕ್ಷೆಯಲ್ಲಿ ಫೇಲ್ ಮಾಡಿಸ್‌ತಿದ್ರು''

''ಹಾಗಂದ್ರೆ ಇದು ನಿಯಮಾತೀತ ಅಂತ ಹೇಳ್ತೀಯಾ?''

''ಅಷ್ಟೇ ಅಲ್ಲ. ನೀವು ಗಮನಿಸಿದೀರಾ? ಇದು ಶೀಲವೋ ಅಶ್ಲೀಲವೋ ಅಂತನೂ ತಿಳೀತಿಲ್ಲ.

''ಅದಕ್ಕೆ ಭಾವನಾತೀತ ಅಂತಾರೆ. ಸುಮ್ಮನೆ ಈ ಕಥೆ ಮರೆತು ನಿನ್ನ ಕೆಲಸ ನೋಡು, ಹೇಳುವುದೇನೋ ಸುಲಭ. ಆದರೆ ತಲೆಗೊಂದು ಹುಳ ಹೊಕ್ಕರೆ ಕಿವಿಗೆ ಹೊಕ್ಕಂತೆ. ಅದನ್ನು ಮರೆಯಲುಂಟೇ? ಪಾಪತ್ತಿಗೂ ಮರೆಯಲಾಗಲೇ ಇಲ್ಲ. ತನಗರ್ಥವಾಗದಿದ್ದರೂ ಎಲ್ಲರ ಪ್ರಶಂಸೆಗಳಿಸಿದೆ ಎಂದಮೇಲೆ ಮೌಲಿಕವಾದದ್ದೇನೋ ಇದ್ದಿರಲೇಬೇಕು. ಇದೇ ವಿಷಯವೆತ್ತಿ ಮಾವಯ್ಯನ ಬಳಿ ಕೊರೆತ ನಡೆಸಿದರು.

''ಇಂತಹ ಕಥೆಗಳೆಲ್ಲಾ ಮಹಾ ಬುದ್ಧಿಜೀವಿಗಳು ಇತರೇ ಬುದ್ಧಿ ಜೀವಿಗಳಿಗಾಗಿ ಬರೆದದ್ದು. ನನ್ನ ನಿನ್ನಂತಹ ಸಾಮಾನ್ಯ ಮೆದುಳುಗಳಿಗೆ ಅರ್ಥವಾಗುವಂತಹದ್ದಲ್ಲ. ಉದಾಹರಣೆಗೆ ಹೇಳ್ತೀನಿ ಕೇಳು'' ಕೇಳು ಜನಮೇಜಯ ಎನ್ನುವ ಧಾಟಿಯಲ್ಲಿ ಹಳೆಯ ಜೋಕಿನ ಪುಸ್ತಕದಲ್ಲಿ ಓದಿದ್ದನ್ನು ಹೇಳಿದರು.

ಮಾಡರ್ನ್ ಆರ್ಟ್‌ನ ಪಿತಾಮಹ ಪಾಬ್ಲೊ ಪಿಕಾಸ್ಸೊವಿನ ಮನೆಗೊಮ್ಮೆ ಕಳ್ಳರು ನುಗ್ಗಿ ಬೆಲೆ ಬಾಳುವ ವಸ್ತುವನ್ನೆಲ್ಲಾ ದೋಚಿ ಓಡಿ ಹೋದರಂತೆ. ಆಗ ಅಲ್ಲಿ ಬಂದ ಪಿಕಾಸೊ ಅವರಲ್ಲೊಬ್ಬನ ಮುಖ ಚಹರೆ ನೋಡಿಬಿಟ್ಟನಂತೆ. ವಿಶ್ವಖ್ಯಾತ ಕಲಾವಿದ. ಅವನ ಮನೆಯಲ್ಲೇ ಕಳ್ಳತನವೆಂದರೆ! ಜನ ರೊಚ್ಚಿಗೆದ್ದರು. (ನಮ್ಮ ಅಣ್ಣಾವ್ರು ಅಪಹೃತರಾದಾಗ ರೊಚ್ಚಿಗೇಳಲಿಲ್ಲವೇ ಥೇಟ್ ಹಾಗೆಯೇ) ಪೋಲೀಸರ ಮೇಲೆ ಉನ್ನತ ವಲಯದಿಂದ ಕಾರ್ಯೋನ್ಮುಖರಾಗಲು ಒತ್ತಡ ಬಂದಿತು. ಉನ್ನತ ಅಧಿಕಾರಿಗಳೇ ಮನೆಗೆ ಆಗಮಿಸಿ ತನಿಖೆ ನಡೆಸಿದರು.

ಪಿಕಾಸ್ಸೊ ತಾವು ಕಂಡಿದ್ದ ಕಳ್ಳನ ಚಹರೆಯನ್ನು ತಮ್ಮದೇ ಶೈಲಿಯಲ್ಲಿ ಚಿತ್ರಿಸಿದರು. ಪೋಲೀಸರು ಅದರ ಹಲವು ನಕಲು ಮಾಡಿ ಎಲ್ಲಾ ಠಾಣೆಗಳಿಗೆ ಹಂಚಿದರು.

ಕೆಲವು ದಿನಗಳ ನಂತರ ಸುಳಿವು ಸಿಕ್ಕಿರುವುದಾಗಿ ತನಿಖಾಧಿಕಾರಿಗಳಿಂದ ಕಲಾವಿದನಿಗೆ ಕರೆ ಬಂದಿತು. ಸಾಮಾನು ಸಿಕ್ಕೇಬಿಟ್ಟಿತೆಂಬ ಖುಷಿಯಲ್ಲಿ ಠಾಣೆಗೆ ಆತ ಧಾವಿಸಿದರು. ''ನೀವು ಬರೆದ ಚಿತ್ರದ ಆಧಾರದ ಮೇಲೆ ನಮ್ಮ ಸಿಬ್ಬಂದಿ ಇವುಗಳನ್ನು ಪತ್ತೆ ಮಾಡಿದ್ದಾರೆ'' ಎಂದು ಮುಂದಿದ್ದ ಗಂಟನ್ನು ಬಿಚ್ಚಿದರು. ಒಳಗಿದ್ದದ್ದು ಒಂದು ಬರ್ನರ್, ಒಂದು ಚಿಮ್ಮುಟ ಹಾಗೂ ಪಿಕಾಸಿ!

''ಇಷ್ಟೆಲ್ಲಾ ಏತಕ್ಕೆ ಹೇಳೊಕ್ಕೆ ಬಂದೆ ಅಂದ್ರೆ, ಮಾಡರ್ನ್ ಆರ್ಟ್‌ನಂತೆ ಮಾಡರ್ನ್ ಸಾಹಿತ್ಯವೂ ಹೆಚ್ಚಿನವರಿಗೆ ಅರ್ಥವಾಗದು. ಅದೆಲ್ಲಾ ಬುದ್ಧಿಜೀವಿಗಳಿಗೇ ಮೀಸಲು'' ಎಂದು ಮಾವಯ್ಯ ಮಾತು ಮುಗಿಸಿದರು.

ಪಾಪತ್ತೆ ಎಂದಿನಿಂದಲೂ ತಾನೊಬ್ಬಳು ಬುದ್ಧಿಜೀವಿ ಎಂದುಕೊಂಡಿದ್ದವರು. ಆ ನಂಬಿಕೆಗೆ ಕೊಡಲಿ ಏಟು ಬಿದ್ದಾಗ ಸೇಡಿನ ಮನೋಭಾವ ಹೆಡೆ ಎತ್ತಿತು. ತಾನೂ ಎಷ್ಟಾದರೂ ಶ್ರಮಪಟ್ಟು ಸಾಮಾನ್ಯ ಮೆದುಳಿಗೆ ಅರ್ಥವಾಗದ, ಅಸಾಮಾನ್ಯ ಬುದ್ಧಿಜೀವಿಗಳ ಬುದ್ದಿಗಷ್ಟೇ ನಿಲುಕುವ ಸಾಹಿತ್ಯ ರಚಿಸಲು ಪಣ ತೊಟ್ಟುಬಿಟ್ಟರು. ಅದಕ್ಕೆಂದೇ ವಿಶೇಷ ಸೂತ್ರ ತಯಾರಾಯಿತು.

ಮರುದಿನ ತನ್ನ ಎಂದಿನ ಶೈಲಿಯಲ್ಲಿ ಕಥೆಯೊಂದನ್ನು ಬರೆದು ಮುಗಿಸಿದರು. ಬರೆಯುವಾಗ ಮಾತ್ರ ಪದಗಳನ್ನು ಸ್ಥಳ ಬಿಟ್ಟು ಬಿಟ್ಟು ವಿರಳವಾಗಿ ಬರೆದರು. ಸಾಣೆ ಹಿಡಿದ ಕತ್ತರಿಯಿಂದ ಒಂದೊಂದೇ ಪದಗಳನ್ನು ಕತ್ತರಿಸಿ ಬುಟ್ಟಿಯೊಂದರಲ್ಲಿ ತುಂಬಿಟ್ಟರು.

'ಆಂಟೀ ಚಾಕ್ಲೇಟ್ ಬೇಕು ಕೊಡ್ತೀರಾ?' ಪಕ್ಕದ ಮನೆಯ ಮಗು ಒಳ ಬಂದಿತು. ''ಒಂದಲ್ಲ ಹತ್ತು ಚಾಕ್ಲೇಟ್ ಕೊಡ್ತೀನಿ. ನನಗೆ ಸ್ವಲ್ಪ ಹೆಲ್ಪ್ ಮಾಡ್ತೀಯಾ?'' ಚಾಕ್ಲೆಟ್ಟಿನ ಆಸೆಗೆ ಮಗು ಸಮ್ಮತಿಸಿತು. ಪಾಪತ್ತೆ ಬುಟ್ಟಿ ಕುಲುಕುತ್ತಿದ್ದಂತೆ ಮಗು ಒಂದೊಂದೇ ಪದವನ್ನು ತೆಗೆದುಕೊಟ್ಟಿತು. ಆಕೆ ಅದನ್ನು ಅನುಕ್ರಮವಾಗಿ ಬಿಳಿಯ ಹಾಳೆಯ ಮೇಲೆ ಮುತ್ತಿನ ಅಕ್ಷರಗಳಲ್ಲಿ ಮೂಡಿಸುತ್ತಾ ಹೋದರು. ಲೇಖನ ಮುಗಿದೊಡನೆ ಸಂಪಾದಕರಿಗೆ ರವಾನೆಯಾಯ್ತು. ಇದುವರೆಗೂ ಸಂಪಾದಕರಿಂದ ಯಾವುದೇ ಪ್ರತಿಕ್ರಿಯೆ ಇಲ್ಲವಂತೆ, ಬುಟ್ಟಿಯಿಂದ ಬಂದದ್ದು ಬುಟ್ಟಿಗೇ ಹಿಂದಿರುಗಿತೇ ಎಂಬ ಸಂದೇಹ ಪಾಪತ್ತೆಗೆ. ಇದನ್ನು ತಿಳಿಯುವುದೆಂತು?

★★★

# ಪಾದುಕಾಸಹಸ್ರ

– ಡಾ. ಪ್ರಭುಶಂಕರ

ನನ್ನ ಮಿತ್ರ ಸಿಂಗಪ್ಪ ಕೊನೆಗೂ ಮನೆ ಬದಲಾಯಿಸಿದ. ಈ ವಾಕ್ಯದಲ್ಲೇ ವಿವರಣೆಯನ್ನು ಅಪೇಕ್ಷಿಸುವ ಕೆಲವು ಪದಗಳಿವೆ. ಮೊದಲನೆಯದಾಗಿ ವಿವರಿಸಬೇಕಾದದ್ದು ''ಮಿತ್ರ'' ಎಂಬುದು. ನನ್ನನ್ನು ಬಲ್ಲ ಯಾರೂ ನನಗೆ ಮಿತ್ರರಿದ್ದಾರೆ ಎಂದರೆ ನಂಬುವುದಿಲ್ಲ. ಅದು ನ್ಯಾಯವಾದದ್ದು. ಎಷ್ಟೋ ಜನ ಸಜ್ಜನರು ನನ್ನ ಸ್ವಭಾವದ ಅಲ್ಪಸ್ವಲ್ಪ ಪರಿಚಯವಾದೊಡನೆಯೇ ಉಪಾಯವಾಗಿ ಜಾರಿಕೊಂಡಿದ್ದಾರೆ. ನನ್ನಿಂದ ದೂರವಾಗುವುದಕ್ಕೆ ನಾನಾ ಕಾರಣಗಳನ್ನು ಕೊಡುತ್ತಾರೆ, ನನ್ನ ಹಿಂದೆ. ನಾನು ದುರಹಂಕಾರಿ; ಕೃತಘ್ನ; ಕಪ್ಪಗಿದ್ದೇನೆ, ಇತರರನ್ನು ಹಿಂದುಮುಂದೆ ನೋಡದೆ ಹಾಸ್ಯ ಮಾಡುತ್ತೇನೆ; ಹೆಚ್ಚು ಸಲ ಕಾಫಿ ಕುಡಿಯುತ್ತೇನೆ - ಇತ್ಯಾದಿ. ಇವು ಯಾವುವೂ ಸುಳ್ಳಲ್ಲ. ಆದ್ದರಿಂದ ಸ್ವಲ್ಪ ಕಾಲ ಮಿತ್ರರಾಗಿದ್ದವರು ದೂರ ಸರಿಯುವುದು ಅನಿವಾರ್ಯವಾಯಿತು. ಅದಕ್ಕೂ ಅನೇಕ ಕಾರಣಗಳಿವೆ. ಮೊದಲನೆಯ ಕಾರಣ ಅವನಿಗೆ ಕನ್ನಡ ಬರುವುದಿಲ್ಲ ಎಂಬುದು. ಅವನು ಉತ್ತರ ಪ್ರದೇಶದವನು. ನಿಖರವಾಗಿ ಹೇಳಬೇಕಾದರೆ ವಾರಣಾಸಿಯ ಆಸುಪಾಸಿನವನು. ತನ್ನ ಪೂರ್ವಜರು ದರೋಡೆಕಾರರಾಗಿದ್ದರು ಎಂಬುದನ್ನು ಅವನು ಹೆಮ್ಮೆಯಿಂದ ಹೇಳಿಕೊಳ್ಳುತ್ತಾನೆ. ಒಮ್ಮೆ ದೊಡ್ಡ ಅಧಿಕಾರಿಯೊಬ್ಬರು ಅವನ ಮುಂದೆ ಬಡಾಯಿ ಕೊಚ್ಚಿಕೊಂಡರು - ''ನಮ್ಮ ತಾತ ಕಾಶಿಗೆ ಹೋಗಿಬಂದರು.'' ಥಟ್ಟನೆ ನಮ್ಮ ಸಿಂಗಪ್ಪ ಅವರ ಗರ್ವಭಂಗ ಮಾಡಿದ - ''ನಿಮ್ಮ ತಾತ ಕಾಶಿಗೆ ಹೋಗಿದ್ದಾಗ ನಮ್ಮ ತಾತ ಅಲ್ಲಿರಲಿಲ್ಲ ಎಂಬುದಂತೂ ಖಾತ್ರಿ.'' ಇವರು ''ಏಕೆ?'' ಎಂದು ಕೇಳಿದರು. ಸಿಂಗಪ್ಪ ಹೇಳಿದ - ''ನಮ್ಮ ತಾತ ಅಲ್ಲಿದ್ದಿದ್ದರೆ ನಿಮ್ಮ ತಾತ ಹಿಂದಕ್ಕೆ ಬರುತ್ತಿರಲಿಲ್ಲ.'' ಇವರಿಗೆ ಅರ್ಥವಾಗಲಿಲ್ಲ. ''ಅದೇಕೆ?'' ಎಂದರು. ''ನಮ್ಮ ತಾತ ಪ್ರಸಿದ್ಧ ಡಾಕೂ. ಅವರಿದ್ದಿದ್ದರೆ ನಿಮ್ಮ ತಾತ ಹಿಂದಕ್ಕೆ ಬರಲು ಬಿಡುತ್ತಿರಲಿಲ್ಲ.'' ಅಷ್ಟು ಅಭಿಮಾನ ಅವನಿಗೆ ತನ್ನ ಪೂರ್ವಜರ ವಿಷಯಕ್ಕೆ.

ಅಂಥ ಪ್ರಸಿದ್ಧವಾದ ಕಾಶಿಯಿಂದ ಮೈಸೂರಿಗೆ ಬಂದು ನೆಲೆಸಿರುವ ಸಿಂಗಪ್ಪ ಹದಿನಾರು ವರ್ಷವಾದರೂ ಕನ್ನಡ ಕಲಿತಿಲ್ಲ. ಇಂಗ್ಲಿಷಿನಲ್ಲಿ ಮಾಡನಾಡುತ್ತಾನೆ. ಅವನ ಇಂಗ್ಲಿಷನ್ನು ಅರ್ಥಮಾಡಿಕೊಂಡು ಮೆಚ್ಚಿ ಹೊಗಳುವ ಕೆಲವೇ ಜನರಲ್ಲಿ ನಾನೂ ಒಬ್ಬ. ಆದ್ದರಿಂದಲೇ ಅವನು ನನ್ನ ಮಿತ್ರನಾಗಿ ಉಳಿದಿದ್ದಾನೆ. ಅಲ್ಲದೆ

ನಮ್ಮ ಹಿರಿಯರಲ್ಲಿ ಕೆಲವರಾದರೂ ಅವನ ಹಿರಿಯರ ಸಾಹಸಕ್ಕೆ ಸಮಸಮವಾದ ಸಾಹಸಗಳನ್ನು ಮಾಡಿ ತೋರಿಸಿದವರೇ. ಈ ಕಾರಣಕ್ಕೂ ನನಗೆ ಅವನಲ್ಲಿ ಮೆಚ್ಚುಗೆ. ಇನ್ನೂ ಒಂದು ರಹಸ್ಯ ಕಾರಣಕ್ಕಾಗಿ ನಾನು ನಾನಾ ವಿಧವಾದ ಆಹಾರ ಪದಾರ್ಥಗಳನ್ನು ಕೊಟ್ಟು ಅವನನ್ನು ಕೊಬ್ಬಿಸುತ್ತಿದ್ದೇನೆ. ನನ್ನ ಕೆಲವರು ಮಿತ್ರರು ಕನ್ನಡಾಂಬೆಗಾಗಿ ರಕ್ತ ಸುರಿಸಲು ಸದಾ ಹಾತೊರೆಯುತ್ತಿದ್ದಾರೆ. ಆದರೆ ಅವರಲ್ಲಿ ಐದಾರು ಜನರ ರಕ್ತವನ್ನು ಒಟ್ಟುಗೂಡಿಸಿದರೂ ಅದು ಒಂದು ಔನ್ಸಿನಷ್ಟೂ ಆಗುವುದಿಲ್ಲ. ಸಿಂಗಪ್ಪನಿಗೆ ನಾನು ಎಷ್ಟು ಕನ್ನಡ ಪ್ರೇಮ ಹುಟ್ಟಿಸಿದ್ದೇನೆ ಎಂದರೆ ಅವನು ಕೂಡ ಕನ್ನಡಾಂಬೆಗಾಗಿ ರಕ್ತವನ್ನು ಹರಿಸಲು ಸಿದ್ಧ ಎಂದು ಹೇಳುತ್ತಾನೆ. ಕನ್ನಡಾಂಬೆಗೆ ರಕ್ತವನ್ನು ನೀಡಲೇಬೇಕಾಗಿ ಬಂದರೆ ನರಪೇತಲ ನಾರಾಯಣರನ್ನು ಉಳಿಸಿ ಸಿಂಗಪ್ಪನ ರಕ್ತವನ್ನೇ ಹರಿಸೋಣ ಎಂದು ತೀರ್ಮಾನ ಮಾಡಿದ್ದೇನೆ. ಆಗ ಅನಾಯಾಸವಾಗಿ ಮೂರು ಕಾರ್ಯಗಳು ಸಾಧಿತವಾಗುತ್ತವೆ - ಒಂದು, ನನ್ನ ನರಪೇತಲ ನಾರಾಯಣ ಮಿತ್ರರು ಉಳಿದುಕೊಳ್ಳುತ್ತಾರೆ. ಎರಡು, ಕನ್ನಡಮ್ಮನಿಗೆ ಬೇಕಾದ ರಕ್ತ ದೊರಕುತ್ತದೆ. ಮೂರು, ಸಾರ್ವಭೌಮ ಸ್ವಭಾವದ ಹಿಂದಿಯವನೊಬ್ಬನನ್ನು ಹತಮಾಡಿದ ಪುಣ್ಯ ದೊರಕುತ್ತದೆ.

ಇರಲಿ, ಈಗ ನನ್ನ ಮೂಲ ನಿರೂಪಣೆಗೆ ಹಿಂದಿರುಗೋಣ. ಅದೇನು? ನೀವು ಮರೆತಿದ್ದೀರಿ, ನನಗೆ ಗೊತ್ತು. ಪಂಪ, ರನ್ನ, ಹರಿಹರ, ಕುಮಾರವ್ಯಾಸ, ಕುವೆಂಪುಗಳನ್ನು ಸೂರ್ಯಚಂದ್ರರಿರುವವರೆಗೂ ಮರೆಯುವುದಿಲ್ಲ ಎಂಬ ಧೀರ ಪ್ರತಿಜ್ಞರಾದ ಕನ್ನಡಿಗರೇ, ನಾನು ಕೇವಲ ಮೂರು ನಿಮಿಷಗಳ ಹಿಂದೆ ಹೇಳಿದ್ದನ್ನೇ ಮರೆತಿದ್ದೀರಲ್ಲಾ, ನಿಮ್ಮ ಜ್ಞಾಪಕಶಕ್ತಿಯನ್ನು ಎಷ್ಟು ಕೊಂಡಾಡಿದರೂ ಸಾಲದು. ನನಗೋ-ನನಗೂ ನೆನಪಿಲ್ಲ. ಇರಲಿ, ವಿಷಯ ಇಷ್ಟು. ನನ್ನ ಮಿತ್ರ ಕೊನೆಗೂ ಮನೆ ಬದಲಾಯಿಸಿದ ಎಂದೆ. ಕೊನೆಗೂ ಎಂದರೇನು? ಎರಡು ವರ್ಷ ಸತತವಾಗಿ ಅವನ ಮನೆಯವರೂ, ಹಿತೈಷಿಗಳಾದ ನಾವೂ ಒತ್ತಾಯ ಪಡಿಸಿದ ಮೇಲೆ ಒಂದು ಮೊಹಲ್ಲಾದಿಂದ ಇನ್ನೊಂದಕ್ಕೆ ಹೋಗಲು ಒಪ್ಪಿದ. ಬಾಡಿಗೆಗೆ ಹಿಡಿದಿದ್ದ ಮನೆಯಲ್ಲಿ ಒಂದೇ ಕೊಠಡಿಯಿದ್ದರೂ, ಅವನ ಮಕ್ಕಳ ಸಂಖ್ಯೆ ಮೂರಕ್ಕೇರಿದರೂ, ಅವನ ಏಕಮಾತ್ರ ಪುತ್ರನಿಗೆ ಕೇವಲ ಇನ್ನೂರು ಜನ ಮಿತ್ರರಿದ್ದು ಅವರು ಅಷ್ಟೂ ಜನ ಏಕಕಾಲದಲ್ಲಿ ಕಾಂಪೌಂಡಿನ ಮೇಲೆ ಕೂರಲು ಪ್ರಯತ್ನಿಸುತ್ತಿದ್ದುದನ್ನು ಮುಂದಯೇ ವಾಸವಾಗಿದ್ದ ಮನೆಯ ಮಾಲಿಕರು ನಾನಾ ವಿಧವಾಗಿ ಪ್ರತಿಭಟಿಸುತ್ತಿದ್ದರೂ ಸಿಂಗಪ್ಪ ಮನೆ ಬದಲಾಯಿಸಲು ಸುತರಾಂ ಒಪ್ಪಿರಲಿಲ್ಲ. ತಾನು ಅದೇ ಮೊಹಲ್ಲದಲ್ಲಿ ಬೇರೆ ಯಾವುದೇ ಮನೆಗೆ ಹೋಗಲು ಸಿದ್ಧವೆಂದೂ ಬೇರೆ ಯಾವುದೇ ಮೊಹಲ್ಲೆಗೆ ಹೋಗುವುದು ಸಾಧ್ಯವೇ ಇಲ್ಲವೆಂದೂ ಸಿಂಗಪ್ಪ ಮೊಂಡು ಹಿಡಿದಿದ್ದ. ಅದಕ್ಕೆ ಅವನು ನೀಡುತ್ತಿದ್ದ ಕಾರಣಗಳು ಮೂರು.

ಮೊದಲನೆಯದಾಗಿ ಸಿಂಗಪ್ಪ ಬೆಳಗಿನ ವಾಕಿಂಗ್ ಪದ್ಧತಿಯವನು. ಬೇಗ ಎದ್ದು ವಾಕಿಂಗ್ ಹೊರಟಾಗ ಮೊದಮೊದಲು ಆ ಮೊಹಲ್ಲೆಯ ಹತ್ತಾರು ನಾಯಿಗಳು ಅವನನ್ನು ಅಟ್ಟಿಸಿಕೊಂಡು ಬರಲು ಪ್ರಯತ್ನಿಸುತ್ತಿದ್ದುವು. ಸಿಂಗಪ್ಪ ನಾನಾ ಉಪಾಯಗಳಿಂದ ಅವೆಲ್ಲವುಗಳ ಸ್ನೇಹ ಸಂಪಾದಿಸಿದ್ದ. ತಾನು ಬೇರೆ ಮೊಹಲ್ಲೆಗೆ ಹೋಗಿ ಬೆಳಿಗ್ಗೆ ವಾಕಿಂಗ್ ಹೊರಟಾಗ ಆ ಮೊಹಲ್ಲೆಯ ನಾಯಿಗಳು ಅಟ್ಟಿಸಿಕೊಂಡು ಬರುತ್ತವೆಯಲ್ಲ. ಅವುಗಳ ಸ್ನೇಹ ಸಂಪಾದಿಸಲು ಎಷ್ಟು ಶ್ರಮ ಪಡಬೇಕು? ಆದ್ದರಿಂದ ಅದು ಆಗದಹೋಗದ ಮಾತು ಎಂಬುದು ಅವನ ತೀರ್ಮಾನ.

ಎರಡನೆಯದು ಅವನ ಮನೆಗೆ ಕೆಲಸಕ್ಕೆ ಬರುತ್ತಿದ್ದ ಹೆಂಗಸಿನ ಔದಾರ್ಯಕ್ಕೆ ಸಂಬಂಧಿಸಿದ ಕಾರಣ. ಒಂದಾನೊಂದು ದಿನ ಸಿಂಗಪ್ಪನ ಹಿರಿಯಧಿಕಾರಿಯೊಬ್ಬರು ತುರ್ತಾಗಿ ತಮಗೆ ಮೂರು ಸಾವಿರ ರೂಪಾಯಿ ಸಾಲ ಬೇಕು ಎಂದು ಸಿಂಗಪ್ಪನನ್ನು ಕೇಳಿದರು. ಸಿಂಗಪ್ಪ ಜೋರಾಗಿ ಬಿದ್ದುಬಿದ್ದು ನಕ್ಕು ''ನಮ್ಮ ಮನೆಯ ಕೆಲಸದವಳ ಬಳಿ ಎಂದೂ ಅಷ್ಟು ಹಣ ಸಿಕ್ಕಲಾರದು'' ಎಂದುಬಿಟ್ಟ. ಅವನ ಅಧಿಕಾರಿಗಳಿಗೆ ಅರ್ಥವಾಗದೆ ಪಿಳಿಪಿಳಿ ಎಂದು ಕಣ್ಣು ಬಿಡುತ್ತಿದ್ದರು.

ಸಿಂಗಪ್ಪ ಅವರ ನೆರವಿಗೆ ಬಂದು ವಿವರಿಸಿದ. ''ನೋಡಿ, ನನಗೆ ಬೇಕಾದಾಗಲೆಲ್ಲ ಸಾಲ ಕೊಡುವವರು ನಮ್ಮ ಮನೆಯ ಕೆಲಸದ ಹೆಂಗಸು. ಅವರ ಹತ್ತಿರ ಸಿಕ್ಕುವ ಗರಿಷ್ಠ ಮೊತ್ತ ಹತ್ತು ರೂಪಾಯಿ.'' ಈಗ ಸಿಂಗಪ್ಪ ಬೇರೆ ಮೊಹಲ್ಲಾಕ್ಕೆ ಹೋಗುವುದಾದರೆ ಆಕೆ ಅಷ್ಟು ದೂರ ಬರುವುದಕ್ಕೆ ಆಗದು ಎಂದರಂತೆ. ಇನ್ನು ಸಿಂಗಪ್ಪನಿಗೆ ಸಾಲ ಹುಟ್ಟುವುದು ಎಲ್ಲಿ?

ಮೂರನೆಯ ಕಾರಣ ತೀರ ರಹಸ್ಯವಾದದ್ದು. ಸಿಂಗಪ್ಪನ ಆಸುಪಾಸಿನ ಮನೆಗಳಿಗೆ ಆಗಾಗ ಜಗದ್ಗುರುಗಳೊಬ್ಬರು ಪಾದಪೂಜೆಗೆ ಎಂದು ಬರುತ್ತಿದ್ದರು. ಅವರು ಸತ್ಪುರುಷರು. ಪಾದಪೂಜೆ ಮಾಡುತ್ತೇವೆ ಎಂದ ಕೂಡಲೇ ತಮ್ಮದೇ ಪಾದಗಳನ್ನು ಮುಂಚಾಚದೆ ತಮ್ಮ ಗುರುಗಳ ಬೆಳ್ಳಿ ಪಾದುಕೆಗಳನ್ನು ಇಟ್ಟು ಪೂಜಿಸುತ್ತಿದ್ದರು. ವಾರಣಾಸಿಯ ಪಂಡಾಗಳ ವಂಶದ ಸಿಂಗಪ್ಪನಿಗೆ ಆ ಬೆಳ್ಳಿಯ ಪಾದುಕೆಗಳ ಮೇಲೆ ಉತ್ಕಟವಾದ ಭಕ್ತಿ ಹುಟ್ಟಿತ್ತು. ಅವನ್ನು ಪೂಜಿಸುವುದಕ್ಕಲ್ಲ - ಅವನ್ನು ಅಪಹರಿಸಿ ಕರಗಿಸಿ ಮಾರಿ ತನ್ನ ಸದ್ಯದ ಆವಶ್ಯಕತೆಗಳನ್ನು ಪೂರೈಸಲೆಂದು. ಬೇರೆ ಮೊಹಲ್ಲೆಗೆ ಹೋದರೆ ಈ ಪಾದುಕಾಪಹರಣಕ್ಕೆ ಸಂಬಂಧಿಸಿದ ಚಟುವಟಿಕೆಯ ಕಾರ್ಯಕ್ಷೇತ್ರದಿಂದ ದೂರವಾದಂತಲ್ಲವೆ?

ಎಷ್ಟೊಂದು ಪಾದಪೂಜೆಗಳನ್ನು ನೋಡಿ ಭಕ್ತಿ ಸಮರ್ಪಣೆ ಮಾಡಿದರೂ ಸಿಂಗಪ್ಪನ ಪಾದುಕಾಪಹರಣದ ಪ್ರಯತ್ನ ಫಲಿಸಲಿಲ್ಲ. ಅದಕ್ಕೆ ಕಾರಣಗಳು ಮೂರು. ಸ್ವಯಂ ಜಗದ್ಗುರುಗಳು ಆರೋಗ್ಯ, ದೃಢಕಾಯರಾಗಿದ್ದ ತಮ್ಮ ಗುರುಗಳ ಬೆಳ್ಳಿಯ ಪಾದುಕಾದ್ವಯದ ರಕ್ಷಣೆಯಲ್ಲಿ ನಿರತರಾಗಿದ್ದರು. ಎರಡನೆಯದು ಭಕ್ತಾದಿಗಳ ಮನೆಯ ಪೌಷ್ಟಿಕ ಆಹಾರದಿಂದ ಗರಡಿಯ ಮಲ್ಲರಂತೆ ಬೆಳೆದಿದ್ದ ಪರಿಚಾರಕ ವರ್ಗಕ್ಕೂ ಅವೇ ಪಾದುಕಾದ್ವಯದ ಮೇಲೆ ಕಣ್ಣಿದ್ದು, ಸ್ವಾಮಿಗಳು ಸ್ನಾನ, ಶೌಚಾದಿಗಳಿಗೆ ಹೋದಾಗ ಆ ಪಾದುಕೆಗಳಿಗೆ ಪಹರೆ ನೀಡುತ್ತಿದ್ದದು. ಮೂರನೆಯದು ಭಕ್ತಾದಿಗಳೂ ಜಗದ್ಗುರುಗಳೂ ಶ್ರದ್ಧೆಯಿಂದ ಗಂಟೆಗಟ್ಟಲೇ ಅವನ್ನೇ ನೋಡುತ್ತಾ ಕುಳಿತಿರುತ್ತಿದ್ದುದು. ಈ ಚಕ್ರವ್ಯೂಹವನ್ನು ಭೇದಿಸಲಾರದೆ ಹತಾಶನಾದ ಸಿಂಗಪ್ಪ ಸೋಲೊಪ್ಪಿಕೊಂಡ. ನೂರಾರು ಜನ ಯಾತ್ರಿಕರನ್ನು ಕ್ಷಣಾರ್ಧದಲ್ಲಿ ನಿರ್ಗತಿಕರನ್ನಾಗಿ ಮಾಡಿದ್ದ ದರೋಡೆಕಾರರಾದ ತನ್ನ ತಾತ ಮುತ್ತಾತಂದಿರು ಯಃಕಶ್ಚಿತ್ ಒಂದೇ ಒಂದು ಜೊತೆ ಬೆಳ್ಳಿಯ-ಚಿನ್ನದ್ದಲ್ಲ, ಮುತ್ತು ರತ್ನಗಳದ್ದಲ್ಲ, ಕೇವಲ ಬೆಳ್ಳಿಯ-ಪಾದುಕೆಗಳನ್ನು ಹಾರಿಸಲಾಗದೇ ಹೋದ ತನ್ನನ್ನು ನರಕದಲ್ಲಿದ್ದೇ ಎಂಥೆಂಥ ಮಾತುಗಳಲ್ಲಿ ಬಯ್ಯುತ್ತಿರಬಹುದು ಎಂಬುದನ್ನು ನೆನೆದು ಪರಿತಪಿಸಿದ. ನನ್ನ ಮುಂದೆಯೇ ತನ್ನ ಸ್ಥಿತಿಯನ್ನು ವರ್ಣಿಸಿ ಗಳಗಳನೆ ಅತ್ತ.

ಇಷ್ಟು ಅವಮಾನವಾದ ಮೇಲೆ ಈ ಮೊಹಲ್ಲದಲ್ಲಿ ಜನರಿಗೆ ಮುಖ ತೋರಿಸುವುದು ಹೇಗೆ ಎಂದು ಬೇರೆ ಮೊಹಲ್ಲಾಕ್ಕೆ ಮನೆ ಬದಲಾಯಿಸಲು ಒಪ್ಪಿದ. ಬೇರೆ ಮನೆಯೂ ಸಿಕ್ಕಿತು. ಸಾಮಾನು ಸರಂಜಾಮುಗಳನ್ನು ಕಟ್ಟಿದ್ದಾಯಿತು. ಇನ್ನೇನು ಲಾರಿಯೊಂದಕ್ಕೆ ಸಾಮಾನು ತುಂಬಬೇಕು, ಆಗ ನಾನು ಅವನ ಮನೆಗೆ ಹೋದೆ. ಎಲ್ಲ ಸಾಮಾನು ಸರಂಜಾಮುಗಳ ಮೇಲೂ ಲೋಕಾಭಿರಾಮವಾಗಿ ಕಣ್ಣು ಹಾಯಿಸಿದೆ. ಅಕಸ್ಮಾತ್ತಾಗಿ ನನ್ನ ದೃಷ್ಟಿ ಮೂರು ಗೋಣೀಚೀಲಗಳ ಮೇಲೆ ಬಿದ್ದು ಅಲ್ಲೇ ಗಟ್ಟಿಯಾಗಿ ಕೀಲಿಸಿಬಿಟ್ಟಿತ್ತು. ಅವುಗಳಿಂದ ಕೆಟ್ಟ ವಾಸನೆ ಬರುತ್ತಿತ್ತು. ''ಸಿಂಗಪ್ಪ, ಆ ಚೀಲಗಳಲ್ಲಿ ಏನಿದೆ?'' ಎಂದು ಕೇಳಿದೆ. ಅವನು ''ಷೂ, ಚಪ್ಪಲಿ ಇತ್ಯಾದಿಗಳು'' ಎಂದ. ನನಗೆ ಏಕಕಾಲಕ್ಕೆ ಆಶ್ಚರ್ಯ, ಸಂತೋಷ, ಮೆಚ್ಚುಗೆ, ಕೋಪ, ಅಸಹಾಯಕತೆ, ಅಸೂಯೆ ಇತ್ಯಾದಿ ನಾನಾ ಭಾವಗಳು, ಅವಸ್ಥೆಗಳು ಕಾಣಿಸಿಕೊಂಡವು. ಕೇಳಿದೆ : ''ಅಲ್ಲಯ್ಯ, ನಿಮ್ಮ ಮನೆ ಪಕ್ಕದಲ್ಲಿ ಶ್ರೀ ರಾಘವೇಂದ್ರ ಸ್ವಾಮಿಗಳ ಮಠ ಸ್ಥಾಪನೆಯಾಗಿ ಇನ್ನೂ ಒಂದು ವರ್ಷ ಕೂಡ ಆಗಿಲ್ಲ. ಆದರೂ ಇಷ್ಟು ಬೇಗ ಇಷ್ಟೊಂದು ಜೊತೆ ಪಾದರಕ್ಷೆಗಳನ್ನು ಹೇಗೆ ತಾನೆ ಸಂಪಾದಿಸಿದೆ?''

ನನ್ನ ಮಿತ್ರ ಖಂಡತುಂಡವಾಗಿ ಹೇಳಿದ : ''ಅವು ಕದ್ದವಲ್ಲ, ನನ್ನವೇ, ನನ್ನದು, ನನ್ನ ಹೆಂಡತಿ ಮಕ್ಕಳದ್ದು. ನನ್ನ ಬಾಲ್ಯದಿಂದ, ಅವರ ಬಾಲ್ಯದಿಂದ, ಒಂದೊಂದು ಜೊತೆ ಹಳೆಯದಾದಾಗಲೂ ಭದ್ರವಾಗಿ ಕಾಪಾಡಿಕೊಂಡು ಬಂದಿದ್ದೇನೆ.''

ಅವನ ಮಾತನ್ನು ನಾನು ನಂಬಿದೆ. ಅಂಥ ಧ್ವನಿಯಲ್ಲಿ ಅವನು ಅದನ್ನು ಹೇಳಿದ್ದ. ನಾನೂ ಅಷ್ಟೇ ಖಂಡತುಂಡವಾದ ಧ್ವನಿಯಲ್ಲಿ ಹೇಳಿದೆ - ''ಈ ಪಾದುಕಾ ಸಹಸ್ರದಿಂದ ದುರ್ವಾಸನೆ ಬರುತ್ತಿದೆ. ಈಗಿಂದೀಗಲೇ ಅವನ್ನು ಹೊರಗೆ ಇರುವ ಮುನಿಸಪಲ್ ಡಬ್ಬಕ್ಕೆ ಹಾಕು. ನಾಳೆಯೇ ಅದನ್ನು ಅಲ್ಲಿಂದ ಸಾಗಿಸುವಂತೆ ನನ್ನ ಕಾರ್ಪೋರೇಟರ್ ಮಿತ್ರರನ್ನು ಕೇಳಿಕೊಳ್ಳುತ್ತೇನೆ.''

ಸಿಂಗಪ್ಪ ಎದ್ದ. ಆ ಮೂಟೆಗಳನ್ನು ಆಗಿಂದಾಗಲೇ ಹೊರಕ್ಕೆ ಒಂದೊಂದಾಗಿ ಸಾಗಿಸುತ್ತಾನೆ ಎಂದು ಭಾವಿಸಿದೆ. ನನ್ನ ನಿರೀಕ್ಷೆ ಸುಳ್ಳಾಯಿತು. ಅವನು ಭಕ್ತರು ಭಕ್ತಿಯಿಂದ ನವಗ್ರಹಗಳಿಗೆ ಪ್ರದಕ್ಷಿಣೆ ಹಾಕುವಂತೆ ಆ ಮೂಟೆಗಳನ್ನು ಒಮ್ಮೆ ಸುತ್ತಿ ಬಂದ. ನನ್ನ ಮುಂದೆ ನಿಂತು ಶ್ರೀ ರಾಮಾನುಜಾಚಾರ್ಯರು ಗೋಪುರದ ಮೇಲಿಂದ ದಿವ್ಯ ಮಂತ್ರವನ್ನು ಘೋಷಿಸಿದ ರೀತಿಯಲ್ಲಿ ಹೇಳಿದ :

''ಇದೇ ಕೊನೆಯ ಬಾರಿ, ನಿನ್ನ ಒಳ್ಳೆಯದಕ್ಕೇ ಈ ಮಾತನ್ನು ಹೇಳುತ್ತಿದ್ದೇನೆ. ಇನ್ನು ಮುಂದೆ ಎಂದೆಂದೂ ಈ ಪಾದರಕ್ಷೆಗಳನ್ನು ಹೊರಕ್ಕೆ ಎಸೆಯುವ ಮಾತನ್ನು ಎತ್ತಬೇಡ.''

ನಾನು, ನನ್ನ ಪೂರ್ವಿಕರನ್ನು ನೆನೆದು ಧೈರ್ಯವಾಗಿ ಅವನನ್ನು ಎದುರಿಸಲು ಎದ್ದು ನಿಂತು ಗಟ್ಟಿಯಾಗಿ ಹೇಳಿದೆ :

''ಆ ಮೂಟೆಗಳಿಂದ ದುರ್ವಾಸನೆ ಬರುತ್ತಿದೆ. ಇಡೀ ಮೊಹಲ್ಲೆಯನ್ನು ದುರ್ಗಂಧದಿಂದ ತುಂಬುವ ಹಕ್ಕು ನಿನಗಿಲ್ಲ. ಎಸೆ ಅವನ್ನು ಆಚೆಗೆ.''

ಸಿಂಗಪ್ಪ ಅಷ್ಟೇ ನಿರ್ಧಾರದ ಧ್ವನಿಯಲ್ಲಿ ಹೇಳಿದ :

''ಇದೇ ಊರಿನಲ್ಲಿ ನೂರಾರು ಫ್ಯಾಕ್ಟರಿಗಳಿಂದ ಇನ್ನೂ ಕೆಟ್ಟ ವಾಸನೆ ಬರುತ್ತಿದೆ. ಪರಿಸರಮಾಲಿನ್ಯ ನಡೆಯುತ್ತಿದೆ. ಅನೇಕರಿಗೆ ಕಣ್ಣು ಕಿವಿ ಮೂಗುಗಳೂ ಹೋಗುತ್ತಿವೆ. ಸಮಾಜ ಸುಧಾರಕನಾದ ನೀನು ಹೋಗಿ ಮೊದಲು ಅವನ್ನೆಲ್ಲ ಮುಚ್ಚಿಸಿ ಆಮೇಲೆ ಇಲ್ಲಿ ಬಂದು ನನ್ನ ಪಾದುಕಾಸಹಸ್ರದ ಮಾತೆತ್ತು.''

ನಾನು ನಿಜವಾಗಿಯೂ ನಿರುತ್ತರ ಕುಮಾರನಾದೆ. ಎರಡು ಮೂರು ಮೊಹಲ್ಲೆಗಳ ಜನರ ಹಿತವನ್ನಾದರೂ ರಕ್ಷಿಸುವ ಮಹೋದ್ದೇಶದಿಂದ ದೀನಾತಿದೀನನಾಗಿ ಅವನ ಮುಂದೆ ಕೈಯೊಡ್ಡಿ ಬೇಡಿಕೊಂಡೆ :

''ಅಯ್ಯ ಸಿಂಗಪ್ಪ, ನೀನು ಪರಮ ಮಿತ್ರ. ನಾನು ಕೈಮುಗಿದು ಕೇಳಿಕೊಳ್ಳುತ್ತೇನೆ. ದಯವಿಟ್ಟು ಹಟಮಾಡಬೇಡ. ಈ ಹಳೆಯ ಪಾದರಕ್ಷೆಗಳನ್ನು ಎಸೆ.''

ನನ್ನ ಮಿತ್ರ ಮೃದುವಾದ. ಜೇನಿನಂಥ ಮಾತುಗಳಲ್ಲಿ ಹೇಳಿದ : ''ಅದೊಂದು ಮಾತು ಬಿಡು. ಅವು ಬರಿಯ ಪಾದರಕ್ಷೆಗಳು ಎಂದು ತಿಳಿಯಬೇಡ. ನನ್ನ ಭವಿಷ್ಯದ ಮಾನಮರ್ಯಾದೆಗಳ ರಕ್ಷೆಗಳು ಅವು. ಆ ವಿಷಯ ನಿನಗೆ ತಿಳಿದಿದ್ದರೆ ನೀನು ಖಂಡಿತವಾಗಿಯೂ ನನ್ನನ್ನು ಒತ್ತಾಯಪಡಿಸುತ್ತಿರಲಿಲ್ಲ.''

ನನ್ನ ಅಸಹಾಯಕತೆ ಕುತೂಹಲಕ್ಕೆ ತಿರುಗಿತು. ''ಅದು ಹೇಗೆ ಆ ಪಾದರಕ್ಷೆಗಳೇ ಭವಿಷ್ಯದಲ್ಲಿ ನಿನ್ನ ಮಾನಮರ್ಯಾದೆಗಳನ್ನು ರಕ್ಷಿಸಿಯಾವು?''

ಹಿಂದೆ ದ್ವಾಪರ ಯುಗದಲ್ಲಿ, ಕಳ್ಳತನ ಮುಂತಾದವುಗಳಲ್ಲಿ ನನ್ನ ಮಿತ್ರನಷ್ಟೇ ಪ್ರಖ್ಯಾತ ಇತಿಹಾಸವುಳ್ಳ ಕೃಷ್ಣ ಪರಮಾತ್ಮನು ತನ್ನ ಪರಮ ಮೂರ್ಖ ಶಿಷ್ಯನಾದ ಅರ್ಜುನನಿಗೆ ಜ್ಞಾನವನ್ನು ಬೋಧಿಸಲು ಪ್ರಯತ್ನಿಸಿದ ಭಂಗಿಯಲ್ಲಿ ನಿಂತು ಸಿಂಗಪ್ಪ ವಿವರಿಸಿದ್ದು ಹೀಗೆ :

''ನಾನು ಇನ್ನೇನು ನಿವೃತ್ತನಾಗುತ್ತೇನೆ. ನಿವೃತ್ತನಾದ ಕೂಡಲೆ ಮಹಾ ಚುನಾವಣೆಯಲ್ಲಿ ಅಭ್ಯರ್ಥಿಯಾಗಿ ನಿಲ್ಲುತ್ತೇನೆ. ನಿಂತಮೇಲೆ ಚುನಾವಣಾ ಭಾಷಣ ಮಾಡಲೆಬೇಕಷ್ಟೆ? ಭಾಷಣ ಮಾಡಲು ನಿಲ್ಲುತ್ತೇನೆ. ಭಾಷಣದಲ್ಲಿ ನಾನು ಅನೇಕಾನೇಕ ಆಶ್ವಾಸನೆಗಳನ್ನು ನೀಡುತ್ತೇನೆ. ಬಡತನವನ್ನು ನಿವಾರಿಸುತ್ತೇನೆ. ನಿಮ್ಮ ಪ್ರದೇಶದಲ್ಲಿ ನದಿಯಿರಲಿ ಬಿಡಲಿ, ಅದರಲ್ಲಿ ನೀರಿರಲಿ ಬಿಡಲಿ, ಅಣೆಕಟ್ಟುಗಳನ್ನು ಕಟ್ಟಿಸುತ್ತೇನೆ. ನಿಮ್ಮೂರಿಗೆ ಸಾಧಾರಣವಾದ ಖಾಸಗಿ ಬಸ್ಸಿನ ಟಾಪಿನ ಮೇಲೂ ಹಿಂದಿನ ಕಬ್ಬಿಣದ ಏಣಿಯ ಮೇಲೂ ಜನರು ಪ್ರಯಾಣ ಮಾಡುವುದನ್ನು ತಪ್ಪಿಸಿ ಹೆಲಿಕಾಪ್ಟರ್ ಸರ್ವಿಸುಗಳನ್ನು ಏರ್ಪಡಿಸುತ್ತೇನೆ. ಸರಾಸರಿ ಹನ್ನೆರಡು ಮಕ್ಕಳಿದ್ದವರಿಗೆಲ್ಲ ಎಲ್ಲ ಮಕ್ಕಳಿಗೂ ಕೆಲಸ ಕೊಡಿಸುತ್ತೇನೆ. ನೀವು ಐವತ್ತೇ ವಯಸ್ಸನ್ನು ತಲುಪಿದೊಡನೆಯೇ ವೃದ್ಧರೆಂದು ಸಾರಿ ವೃದ್ಧಾಪ್ಯ ವೇತನ ಕೊಡಿಸುತ್ತೇನೆ. ನಿಮ್ಮ ಮಕ್ಕಳ ಮದುವೆಯಲ್ಲಿ ಒಂದೇಕೆ ಎರಡೆರಡು ತಾಳಿ ಕೊಡಿಸುತ್ತೇನೆ. ಒಂದು ವೇಳೆ ಚುನಾಯಿತನಾದರೆ, ನನ್ನಂಥವನನ್ನು ಚುನಾಯಿಸಿದ ನಿಮ್ಮನ್ನು ಅಭಿನಂದಿಸಲು ಬರುತ್ತೇನೆ. ಆ ಸಭೆಗೆ

ಖಂಡಿತವಾಗಿಯೂ, ನೀವು ಸಭೆ ಏರ್ಪಡಿಸಿದ ದಿನವೇ, ಎಷ್ಟೋ ಗಂಟೆಗಳು ತಡವಾಗಿಯಾದರೂ ಸರಿ - ಅದೇ ದಿನವೆ ಬರುತ್ತೇನೆ. ಹೀಗೆ ನೂರಾರು ಆಶ್ವಾಸನೆಗಳನ್ನು ನೀಡುತ್ತೇನೆ.''

ಅವನು ನಿಲ್ಲಿಸಿ ಸ್ವಲ್ಪ ಉಸಿರು ತೆಗೆದುಕೊಂಡು ಹೇಳಿದ - ''ಆಗ ಏನಾಗುತ್ತದೆ? ಆಶ್ವಾಸನೆಗಳನ್ನು ಕೇಳಿ ಕೇಳಿ ಅವುಗಳಲ್ಲಿ ಒಂದೂ ಈಡೇರದ್ದರಿಂದ ಸಿಟ್ಟಿಗೆದ್ದ ಜನ ಏನು ಮಾಡುತ್ತಾರೆ?''

ನಾನು ಉತ್ತರ ಹೇಳಲಿಲ್ಲ. ಅವನೇ ಮುಂದುವರಿಸಿದ : ''ಕೈಗೆ ಸಿಕ್ಕಿದ್ದನ್ನು ನನ್ನ ಕಡೆಗೆ ಎಸೆಯಲು ಪ್ರಾರಂಬಿಸುತ್ತಾರೆ. ಕೆಲವರು ತೀರ ಹಳೆಯದಾದ ತಮ್ಮ ಚಪ್ಪಲಿಗಳನ್ನೇ ಎಸೆಯಲು ಮುಂದಾಗುತ್ತಾರೆ. ಆಗ ನಾನೇನು ಮಾಡುತ್ತೇನೆ?''. ಆ ಪ್ರಶ್ನೆಗೂ ನಾನು ಉತ್ತರ ಹೇಳಲಿಲ್ಲ. ಏಕೆಂದರೆ ನನಗೆ ಉತ್ತರ ಗೊತ್ತಿರಲಿಲ್ಲ. ನನ್ನ ಮಿತ್ರ ಈಗ ತನ್ನ ಭಗವದ್ಗೀತೆಯ 'ಕರ್ಮಯೋಗ'ದ ಅಧ್ಯಾಯವನ್ನು ಉಪದೇಶಿಸಲು ತೊಡಗಿದ :

''ನಾನೇನು ಮಾಡುತ್ತೇನೆ? ನನ್ನ ಶ್ರೋತೃಗಳ ಮುಂದೆ ಅಂಗಲಾಚುತ್ತೇನೆ. 'ಸ್ವಾಮಿ. ದಯಮಾಡಿ ತಮ್ಮ ಚಪ್ಪಲಿಗಳನ್ನಾಗಲಿ, ಇತರರ ಪಾದರಕ್ಷೆಗಳನ್ನಾಗಲಿ ನನ್ನತ್ತ ಎಸೆಯಬೇಡಿ. ಇದೋ ನಾನು, ನನ್ನ ಕುಟುಂಬವರ್ಗದವರು ಉಪಯೋಗಿಸಿದ ಚಪ್ಪಲಿ, ಷೂಗಳು ಮೂಟೆಗಟ್ಟಲೆ ಇವೆ. ದಯಮಾಡಿ ಇವನ್ನೇ ಬಳಸಿ.''

ಇಷ್ಟು ಹೇಳಿ ಮತ್ತೆ ಒಂದೆರಡು ಬಾರಿ ಉಸಿರೆಳೆದು ತನ್ನ ಗೀತೆಯ ಪರೋಪಕಾರಾಧ್ಯಾಯವನ್ನು ಬೋಧಿಸಲು ತೊಡಗಿದ :

''ಇಷ್ಟೇ ಅಲ್ಲ, ಸ್ವಾಮೀ, ಸಭಾಸದರೇ, ಮತದಾರರೇ, ತಾವು ನನ್ನ ಚುನಾವಣಾ ಪ್ರತಿಕಕ್ಷಿಯ ಮೇಲೆ ಬೇಕಾದರೂ ಈ ನನ್ನ ಪಾದರಕ್ಷೆಗಳನ್ನೇ ಎಸೆಯಬಹುದು. ನನ್ನ ಚಪ್ಪಲಿಗಳನ್ನು ನನ್ನ ಮೇಲೇ ಎಸೆಯಬೇಕು ಎಂದು ಹೇಳುವಷ್ಟು ಸ್ವಾರ್ಥಿಯೂ, ಅನುದಾರಿಯೂ ನಾನಲ್ಲ.''

''ಹೇಳಯ್ಯಾ, ಈಗ ಹೇಳು. ಪಾದರಕ್ಷೆಗಳ ಮೂರು ಮೂಟೆಗಳನ್ನು ಹೊರಕ್ಕೆ ಎಸೆಯಬೇಕೋ, ಹೊಸ ಮನೆಗೆ ಸಾಗಿಸಬೇಕೋ?''

ಅವನ ದೊಡ್ಡ ನಗೆಯನ್ನು ನನ್ನ ಕ್ಷೀಣವಾದ ಮಂದಹಾಸ ಸ್ವಾಗತಿಸಿತು. ಈಚೆಗೆ ನೋಡಿದಾಗ ಅವನ ಮನೆಯಲ್ಲಿನ ಹಳೆಯ ಪಾದುಕೆಗಳ ಮೂಟೆಗಳ ಸಂಖ್ಯೆ ಆರಕ್ಕೇರಿದೆ.



# ತರಹೇವಾರಿ ಸೀನುಗಳು

**– ಅನಂತ ಕಲ್ಲೋಳ**

ನಿನ್ನೆ ಸಂಜೆಯಿಂದ ಸಣ್ಣಾಂಗ ಜ್ವರ ಬರ್‍ತಿದ್ದವಂತ ಎರಡು ಬಿಲ್ಲೆ ಕ್ರೋಸೀನು ಸೇವಿಸಿ ಗಡದ್ದಾಗಿ ಮುಸುಕು ಹಾಕಿ ಮಲಗಿದಾಂವಗ ರಾತ್ರಿ ಎಲ್ಲ ಕನಸಿನಾಗ ಚಿತ್ರ ವಿಚಿತ್ರ ಸೀನುಗಳು ಕಂಡಿದ್ವು. ಆಗಾಗ ಮೂಗಿನಾಗಿಂದ ಹತ್ತಾರು ಸೀನುಗಳು ಸಿಡಿದಿದ್ವು. ನಸುಕಿನಾಗ ಕಣ್‌ಬಿಟ್ಟು ಕಾಣುವ ಸೀನುಗಳು ಮಜಾನೋ ಅಥವಾ ಕೇಳುವ ಸೀನುಗಳು ಮಜಾನೋ ಅಂತ ತಾಳೆ ಹಾಕುತ್ತಾ ಕುಂತಾಗ ಕಾಣುವ - ಕೇಳುವ ಅಂತಂತ್ರ, ಆಡಿಯೋ ವಿಜ್ಯುಅಲ್ ಸೀನುಗಳೇ ಮಜಾ ಅಂಬುವ ನಿರ್ಧಾರಕ್ಕೆ ಬರ್‍ತಿದ್ದ ಹಾಂಗS ಕಿಟಕಿಯ ಆಚೆ ತೆಂಗಿನ ಮರದ ಗರಿಮ್ಯಾಲ ಕಾಗೆ 'ಕಾಕಾ' ಅಂತ ಕೂಗ್ತಿದ್ದುದು ಕೇಳಿತು. ಕೇಳಿದ್ದರೆ ಜೊತೆಗೆ crow Scene ನ್ನು ನೋಡಿದ್ರ ಮತ್ತೂ ಮಜಾ ಬರಬಹುದೆಂದು ಕಿಟಕಿಯ ಎಡೆಗೆ ನಡೆದೆ. ಆದರೆ ಅಷ್ಟರಾಗ ಮತ್ತS ಸಟ್‌ಸಟಾಂತ ಮೂರು ಸೀನು ಸೀನಿದೆ. ನನ್ನ ಮೂಗಿನ ಕ್ರೆಸ್ಟ್‌ಗೇಟಿನಿಂದ ಸಿಡಿದ ಈ ಆರ್ಭಟಕ್ಕೆ ಮರದ ಮ್ಯಾಗಿನ ಕಾಗಿ ಗಾಬರಿಯಾಗಿ ದೂರ ಹೋಗಿ ಮಾಯವಾಯಿತು. Crow scene ಕಾಣುವ ಅಭಿಲಾಷೆ ಹೀಂಗ 'ಗೊಟಕ್' ಆಯ್ತು; ಪಟಕ್ಕನೇ ನಾನು ಮತ್ತೆರಡು ಕ್ರೋಸೀನು ಮಾತ್ರೆ ನುಂಗಿ ನೀರು ಗುಟುಕರಿಸಿದೆ.

'ಸೀತಾಂವಾ ಸಾಯೂದಿಲ್ಲ ಬಾತಾಂವ ಬದುಕೂದಿಲ್ಲ' ಅಂತ ಗಾದೆಮಾತು ಇದ್ದುದು ನೆನಪಿಗೆ ಬಂತು. ನಾನು ಇಂಥಾ ಪರಿ ಸೀನುತ್ತ ಇದ್ದುದರಿಂದ ನಾನೇನೂ ಸಾಯುವುದಿಲ್ಲ ಅಂಬುವ ಖಾತ್ರಿ ಆಯಿತು. ಅಂದ ಮ್ಯಾಲೆ ನನಾನೇಕೆ ಕಾಕ, ಕಾಕಪಿಂಡದ ಹಂಗಿನಾಗ ಇರಬೇಕು? ''ಹೋದ್ರS ಹೋಗಲಿ ಹಾಕ್ಕೋತ'' ಎಂದು crow scene ತಪ್ಪಿದ್ದಕ್ಕ ಟಿಪ್ಪಣಿಸಿ ಸುಮ್ಮನಾದೆ. ಸೀತಾಂವಾ ಸಾಯೂದಿಲ್ಲ ಬಾತಾಂವಾ ಬದುಕೂದಿಲ್ಲ ಎಂಬ ಭರವಸೆಯ ಗಾದೀಮಾತು ನನ್ನ ಬಾಬತ್ತಿನಾಗ ಸೆಂಟ್ ಪರ್ಸೆಂಟು ಖರೇ ಆಗಬೇಕಾದ್ರ ನಾನು ಬಾತ್ಕೊಳ್ಳಬಾರದು ಅಂಬೂದು ನನ್ನ ಗಮನಕ್ಕೆ ಬಂತು. ಹಾಂಗ ನೋಡಿದ್ರ ನಾನೇನೂ ಬಾತು (ಕೋಳಿ) ಕೊಳ್ಳುವವರ ಪೈಕಿ ಅಲ್ಲ ಬಿಡ್ರಿ!

ಬಾತ್ಕೊಳೋದು ಅಂತಂತ್ರ ಬಾತು ಕೋಳಿ ಕೊಳ್ಳೋದು ಅಂತ ಅಲ್ಲS; ದಪ್ಪನಾಗೋದು, Fat ಆಗೋದು. ಅಂತ ಅರ್ಥ! ನಾನೇ ನನ್ನ ಕೈ ಮೈ ಮುಟ್ಟಿಕೊಂಡು ನೋಡೊಂಡೆ. ನಂತರ ಗಟ್ಟಿ ಮನಸ್ಸು ಮಾಡ್ಕೊಂಡು ಕನ್ನಡಿ

ಮುಂದೆ ನಿಂತೊಂಡೆ. ನಾ ಏನ್ ಬಾಳ ದಪ್ಪ ಅಲ್ಲs ಅಂತ ಅನಿಸ್ತು. ಈಗೀಗ ನನ್ನ ಅಂಗಿ ಚೊಣ್ಣ ಬಿಗಿಧಾಂಗಿ, ಬಿಗಿಧಾಂಗ ಆಗಲಿಕ್ಕೆ ಹತ್ಯಾವ. ನನ್ನ ಸಿಂಪಿಗ ಕಂಪಣ್ಣ ಸರಿಯಾಗಿ ಬಟ್ಟೆ ಹೊಲಿಯೂದಿಲ್ಲ ಅಂತ ಗುಮಾನಿ. ಬಟ್ಟೆ ಉಳಿಸ್ಕೊಂಡು ಕೊಟ್ಟ ಅಳತೆಗಿಂತ ಒಂದೆರಡು ಅಂಗುಲ ಕಡಿಮೆ ಸೈಜಿನಾಗs ಅರುವೆ ಹೊಲೀತಾನ ಅಂತ ನನ್ನ ಅರಿವೆಗೆ ಬಂದಾಗ, ತಕ್ರಾರು ಮಾಡಿದ್ದೆ. ಮಾರಾಯ್ರs ನೀವು ಕೊಂಡಿದ್ದ ಬಟ್ಟೆ ಉಡುಗೇದ, ಶ್ರಿಂಕ್, ಶ್ರಿಂಕಾಗೇದ ಅಂತ ಶ್ರೀಕಾರ ಹಾಕಿ ನನ್ನ ತಕ್ರಾರ ಹಾರ ಹೊಡೀತಾನ.

ನಾ ಬರಾಬರಿ ಬಟ್ಟೆ ಕತ್ತರಿಸೀನು, ಬರಾಬರಿ ಲೈನ್‌ದಾಗ ಹೊಲಿಗಿ ಹಾಕಿಸೀನು ಅಂತ ದೊಡ್ಡ ಬಾಯಿಮಾಡಿ ಒದರುತ್ತ ದೊಡ್ಡ Scene Create ಮಾಡ್ತಾನ. ಆತನ ಈ ಸೀನ್‌ದಿಂದ ನನ್ನ ತಲೀ ಗಿಮಿಗಿಮಿ ಅಂತ ಏಳ್ತದ. ಹೀಂಗ ಭರ್ ಮಾರ್ಕೆಟ್‌ದಾಗ ಎದ್ದ ಸೀನದಿಂದಾಗಿ ನಾನು ತಲೀ ಎತ್ಕೊಂಡು ಬರೂದು ಹ್ಯಾಂಗ ಅಂತ ಪಂಚೇಲೆ ಆಗ್ತಾದ ಕಿಸೇದಾಗಿಂದ ಎರಡು ಆನಾಸೀನು ಮಾತ್ರೆ ನುಂಗಿ ಎದ್ದ ಎಲೀ ತುಸ ಹದಕ್ಕ ಬಂದ ಮ್ಯಾಲ ಮುಖ ಮುಚ್ಚುವ ಹಾಂಗ ಮಾರೀಮ್ಯಾಲ ಕರವಸ್ತ್ರ ಉಜ್ಜಿಕೋತ ಹೊರಡಬೇಕಾಗ್ತದ. ಕಂಪಣ್ಣ ಅಂಥಾಂಗ, ಅರಿವಿನ ಹುಡುಗಿರಬೇಕು, ಹೊರತು ನಾನೇನೂ ಬಾತ್ಕೊಂಡಿಲ್ಲ ಅಂತ ಅರಿವು ಮೂಡಿಧಾಂಗ ಆಗ್ತದ.

ಕಂಪಣ್ಣನ ಕೂಡ ಮಾತಿನ ಕುಸ್ತಿ ಆಡಿ ಮನೆಗೆ ಮರಳುವ ಹೊತ್ತಿನಾಗ ಮನದಾಗ ಒಂದು ವಿಚಾರ ಹೊಳೀತದ; ''ದಾಸವರಣ್ಯರು ಅಂಬಿಗ ನಾ ನಿನ್ನ ನಂಬಿದೆ - ಅಂತ ಹಾಡ್ಯಾರ ಪರಂತೂ ಸಿಂಪಿಗ ನಾ ನಿನ್ನ ನಂಬಿದೆ ಅಂತ ಹಾಡಲಿಲ್ಲ. ಇದ್ರಾಗ ಖರೇನs ಸಂಶೋಧನೆ ನಡೆಯಿಸಿ ಡಾಕ್ಟರೇಟ್ ಪಡ್ಕೋಬಹುದು!'' ಎಂಬ ಆಲೋಚನೆ ಬರ್ತದ.

ಹೀಂಗ ವಿಚಾರ ಮಾಡ್ತಾ ಮನೀಗೆ ಮರಳಿದ್ರೆ ದೊಡ್ಡ ಭಾವ ಗುಂಡಣ್ಣ ದೊಡ್ಡ ದನೀಲೇ ಕೇಳಿದ.

''ಎಲ್ಲಿಗೆ ಹೋಗಿದ್ಯೋ ರಾಮಣ್ಣ; ನಾ ಒಂದು ಅರೆಘಳಿಗೆ ಸರೀತು. ಬಾ.. ಬಾ...

ಗುಂಡಪ್ಪ ನನ್ನ ಹತ್ತಿರ ಮನ್ಯಾಗ ನನ್ನನ್ನು ಒಳ್ಳೇ ಆತ್ಮೀಯತೆಯಿಂದ ಸ್ವಾಗತಿಸಿದ. ಇಂಥ ಹೊತ್ತಿನಾಗs ಆತ ಧಾರಾಳಿ ಆಗಿರ್ತಾನೆ.

''ಹೀಂಗs ಅಡ್ಡಾಡಲಿಕ್ಕೆ ಹೋಗಿದ್ದೆ. ಎಲ್ಲಾ ಆರಾಮ್ ಏನಪಾ ಭಾವಾ?'' ಎಂದೆ.

''ಹ್ಞೂಂ, ಇದ್ದದ್ದು ಆರಾಮ್ಽ! ಖರೇ ಆರಾಮ್ ಅಂತಂದ್ರ ನಿನ್ನದಽ ನೋಡು; ಮನ್ಯಾಗ ಇದ್ದಾಗ ಅಡ್ಡಾಗಿರೋದು ಹೊರಗೆ ಬಿದ್ದರೆ ಅಡ್ಡಾಡೋದು. ಅದಕ್ಕಂತಽ ಇಂಥಾ ಪರಿ ಅಡ್ಡಡ್ಡ ಬೆಳೀಲಿಕ್ಕೆ ಹತ್ತೀದಿ. ಮೈಯ್ಯಾಗಿನ ಬಟ್ಟೆ ಫೆವಿಕಾಲ್ ಹಚ್ಚಿ ಗಟ್ಟ್ಯಾಂಗ್ ಅಂಟಸಿಧಾಂಗ ಕುಂತಾವ'' ಗುಂಡಣ್ಣ ನನ್ನ ಮರ್ಮದ ಮ್ಯಾಗ ಬೆರಳಿಟ್ಟು ತೀಡಿದ. ಅವನ ಚರ್ಮ ಸುಲಿಯೋವಷ್ಟು ಸಿಟ್ಟು ಬಂದಿತು. ಆದರೆ ಹೊಟ್ಟ್ಯಾಗಿನ ಸಿಟ್ಟು ರಟ್ಟ್ಯಾಗ ಟ್ರಾನ್ಸ್‌ಫರ್ ಮಾಡೂವಷ್ಟು ಅವಕಾಶ ಇರಲಿಲ್ಲ. ಆತ ತನ್ನ ಅರ್ಧಾಂಗಿಯ ಹಿರಿಯ ಅಣ್ಣ; ಆಕಾರದಾಗೂ ಡಬ್ಬಲಾಂಗ!

ನಾನು ಬಾತ್ಕೊಂಡಿಲ್ಲ ಅಂಬುದನ್ನು ಜಾಹೀರು ಪಡಿಸಲೋಸುಗ ಸಟ್‌ಸಟಾಂತ ಮತ್ತಽ ಮೂರು ಸಲ ಸೀನಿದೆ.

''ಔಷವಂತನಾಗು, ಭಾಗ್ಯವಂತನಾಗು; ಅಲ್ಲಾಽ; ಇಂಥಾಪರಿ ಸೀನು ಬರ್ಲಿಕ್ಕೆ ಹತ್ಯಾವ, ಏನಾದ್ರೂ ಮೆಡಿಸೀನು ತಗೋಬೇಕಿಲ್ಲೋ?'' ದೊಡ್ಡ ಭಾವ ಗುಂಡಣ್ಣ ದೊಡ್ಡ ಕಾಳಜಿ ಮಾಡೂವವರ್ಹಾಂಗ ಕೇಳಿದ.

''ನಿನ್ನೆ ಕ್ರೋಸೀನು ತಗೊಂಡಿದ್ದೆ; ಈಗ ಅರ್ಧ ಗಂಟೆಯ ಹಿಂದೆ ಅನಾಸೀನು ತೆಗೊಂಡೆ'' ನಾನಂದೆ.

''ಮುಳ್ಳಿನಿಂದ ಮುಳ್ಳು ತೆಗೀಬೇಕಂತಾರ ಹಾಂಗಽ ನೀನು ಸೀನುಗಳಿಂದ ಸೀನು ಪರಿಹರಿಸುವ ಪೈಕಿ ಕಾಣುತ್ತಿ'' ಗುಂಡಣ್ಣನೆಂದ.

''ಭಾವ, ಮೈದುನ ಹರಟೀ ಹೊಡ್ಕೋತ ಕುಂತೀರಿ ಕಾಣ್ತದ. ಅಲ್ಲಾಽ; ಸಿಲಿಂಡರ್ ಮುಗಿದು ಮೂರು ದಿನಾ ಆದ್ದು ಸ್ಟೋದ ಮ್ಯಾಲ ಅನ್ನ ಕುದಿಸೋ ಪ್ರಸಂಗ ಬಂದದ. ಸ್ಟೋದ ಹೊಟ್ಟೆಗೆ ಮೊದಲು ಅನ್ನ ಹಾಕಬೇಕು; ಹೋಗಿ ಕೆರೊಸೀನು ತರಬಾರದ?'' ಮಡದಿ ಭಾಮಾ ಮತ್ತೊಂದು ಸೀನು ಕ್ರಿಯೇಟ್ ಮಾಡಿದಳು.

''ಭಾವಾ ನೋಡಿದಿ ಏನು ನಿನ್ನ ತಂಗಿಯ ಮುಖಭಾವಾ? ಆಯ್ತು ನೀ ಸ್ವಲ್ಪ ಆರಾಮ್ ತಗೋ ಮಾರಾಯ; ಕೆರೋಸೀನು ಬರೋತನಕ ಚಹಾ ಕೂಡ ಸಿಗಲಿಕ್ಕಿಲ್ಲ ನಿನಗ'' ಗಂಡಣ್ಣನಿಗೆ ಅಂದೆ.

''ಹೋಗುವಿ ಸ್ವಲ್ಪ ತಡೀ ಮಾರಾಯ. ನನಗೊಂದು ಮಾತು ಹೊಳೆದದ. ಬೈಬಲ್‌ದಾಗ ಒಂದು ಕಥೀ ಅದಽ ಅಲ್ಲ, ಆ್ಯಂಡ್ಂ ಮತ್ತು ಈವ್ ತಿನ್ನಬಾರದ ಹಣ್ಣು ತಿಂದು Sin ಮಾಡಿದ್ರಂತಽ ಮುಂದ ಈ ಪರಿ ಜಗತ್ತು ಪರಡಿಕೊಂಡೇದಃ

'ಸಿನ್' ದಿಂದ ಸೀನ್ ಉಂಟಾಗೋದು ಲಗಾಯ್ತಿನಿಂದ ಬಂದದ. ಅದಕ್ಕS ನೀನು ಮೆಡಿಸಿನ್, ಕ್ರೋಸಿನ್, ಅನಾಸಿನ್ ಇತ್ಯಾದಿಗಳನ್ನು ಕನ್ನಡ ಸಂಸ್ಕಾರಗೊಳಿಸಿ ಮಡಿಸೀನು, ಕ್ರೋಸೀನು ಅಂತ ಅಂತೀ ಏನು? ಅದನ್ನಷ್ಟು ಹೇಳಿ ಹೋಗು'' ಗುಂಡಣ್ಣ ನನ್ನನ್ನು ತಡವುತ್ತ ಅಂತ.

''ಭಾವಾ ಬೈಬಲ್‌ದಾಗ ಅಂಥ ಕಥೀ ಇದ್ದರ ನಾವು ಮಂತ್ರ ಬಲ್ಲವರು ಪಾಪೋಽಹಂ. ಪಾಪ ಕರ್ಮಾಽಹಂ ಪಾಪಾತ್ಮಾ ಪಾಪಸಂಭವಃ ಅಂತ 'ಸಿನ್'ದ ಆದಿ ನೆನಪಿಸಿಕೊಳ್ತೀವಲ್ಲ. ಸಿನ್‌ದಿಂದS ತರಹೇವಾರಿ ಸೀನುಗಳು ಹೊಮ್ಮುತಾವ... ನಾನು ಪಟ್ಟಾಂಗ ಹೊಡೆಯಲು ಉದ್ಯುಕ್ತನಾದೆ.

''ಸಿನ್‌ನಿಂದ ಸೀನುಗಳೋ, ಸೀನುಗಳಿಂದ ಸಿನ್ನೋ?'' ನನ್ನ ತಲೀ ತಿನ್ನೋ ಹಾಂಗ ಗುಂಡಣ್ಣ ಹರಟೆಗೆ ಟಿಸಿಲೊಡೆದ.

''ಸಿನ್ನು ಅಂತಂತ್ರ ಪಾಪ ನಾವು ಮಕ್ಕಳನ್ನು ಪಾಪ ಪಾಪ ಅಂತೀವಿ. ಇಂಗ್ಲೀಷಿನಾಗ papa ಅಂತಂದ್ರ, ಅಪ್ಪ ಅಂತ ಆಗ್ತದ ಚೈಲ್ಡ್ ಈಸ್‌ದ ಫಾದರ್ ಆಫ್ ಮ್ಯಾನ್ ಅಂತಾನೂ ಅಂತಾರ ಇದನ್ನೆಲ್ಲ ಸಂಕಲಿಸಿದ್ರ ಸಿನ್ನು ಮತ್ತು ಸೀನುಗಳು ಬೀಜ ಮೊದಲೋ ಫಲ ಮೊದಲೋ ಎಂಬಷ್ಟೇ ಜಟಿಗೊಳ್ಳುತದ...''

''ರಾಮಣ್ಣ ಎಲ್ಲಾ ಅನಾಸೀನು ನೀನS ನುಂಗಿ ನೀರು ಕುಡಿದಿದೆಯೋ ಅಥವಾ ಒಂದೆರಡು ಇದ್ದರೆ ನನಗೂ ಕೊಡು. ನಿನ್ನ ಮಾತು ಕೇಳಿ ನನ್ನ ತಲೀ ಎದ್ದದ'' ಗುಂಡಣ್ಣನೆಂದ.

ನಾನು ಆತನಿಗೆ ಅನಾಸೀನು ಮಾತ್ರೆ ತೆಗೆದುಕೊಟ್ಟೆ. ಆತ ನುಂಗಿ ನೀರು ಕುಡಿದ.

''ಆಯ್ತು ಮಾರಾಯ, ರಾತ್ರಿ ಎಲ್ಲಾ ಬಸ್ ಪ್ರವಾಸ ಮಾಡಿ ಬಂದೀನಿ. ಬಸ್ಸು ಬ್ಯಾರೆ ಮೂರು ತಾಸು ತಡಮಾಡಿ ಬಂತು. ನನ್ನ ಪ್ರಾತರ್ವಿಧಿ ಮುಗಿಸಬೇಕಾಗೇದ. ಈಗS ಸೂರ್ಯ ನೆತ್ತಿಮ್ಯಾಲ ಬಂದಾನ...'' ಎಂದು ವಟಗುಡುತ್ತ ಗುಂಡಣ್ಣ ಡಬ್ಬ ಎತ್ಕೊಂಡು ಹಿತ್ತಲ ಕಡೆಗೆ ನಡೆದ ನಾನು ಕೆರೋಸೀನು ತರಲು ಮಡದಿ ನೀಡಿದ ಡಬ್ಬ ಎತ್ಕೊಂಡು ಪೇಟೆಯ ಕಡೆಗೆ ಸಾಗಿದೆ. ಅಂತೂ ಇಂತೂ ಈ ತರಹೇಬಾರಿ ಸೀನುಗಳೇ ನಮ್ಮ ನಿತ್ಯ ಜೀವನದ ಜೀನು (genes) ಗಳಾಗ್ಯಾವ ಅಂಥಾಂಗಾಯ್ತು!

★★★

# ಒಂದೊಂದ್ಸಾರಿ ಹೀಗಾಗುತ್ತೆ

– ಬೇಲೂರು ರಾಮಮೂರ್ತಿ

ಬಾರೋ ಒಂದ್ ರೌಂಡ್ ಹೋಗ್‌ಬರೋಣ ಅಂತ ಆಚಾರಿನ ಸುಬ್ಬ ಎಳ್ಕೊಂಡ್ ಹೋಗಿ ಒಂದ್‌ಗಂಟೆ ಮೇಲಾದ್ರೂ, ಅವರು ಹಿಂದಿರುಗಿ ಬರದೇ ಇದ್ದದ್ದು ಪಾತಿವ್ರತ್ಯ ಧರ್ಮವನ್ನು ಪರಿಪಾಲಿಸಿಕೊಂಡು ಬಂದಿರುವ ಸಿಂಗಾರಮ್ಮನಿಗೆ ಆತಂಕ ಹುಟ್ಟಿಸಿದ್ದು ಸಹಜವೇ. ಈಗಿನವರ ಹಾಗೆ ಗಂಡ ಯಾವ ಕಡೆ ಆದ್ರೂ ಹೋಗ್ಲಿ ಅಂತ ಟಿವಿ ಪರದೆ ಮೇಲೆ ಕಣ್ಣು ಹಾಯಿಸ್ಕೊಂಡ್ ಕೂತಿರೋ ಅಂಥಾ ಹೆಂಗಸಲ್ಲ ಸಿಂಗಾರಮ್ಮ. ಮದುವೆಯಾಗಿ ಎಷ್ಟೋ ವರ್ಷಗಳಾಗಿದ್ದರೂ ಇನ್ನು ಅದೇ ಆತಂಕ, ಅಕರಾಸ್ಥೆ. ಇದು ಎಷ್ಟೋ ಸಾರಿ ಆಚಾರಿಗೆ ಪೀಕಲಾಟ. ಎಲ್ಲಿ ಹೊರಟ್ರೂ, ಎಲ್ಲಿಗೆ ಹೊರಟ್ರಿ, ಎಷ್ಟ್ ಹೊತ್ತಿಗೆ ಬರ್ತೀರ ಅಂತೆಲ್ಲ ಟೈಮ್ ಟೇಬಲ್‌ನೇ ಕೇಳಿಬಿಡ್ತಾಳೆ. ಆದರೆ ನನ್ನನ್ನ ಬಿಟ್ಟು ಎಲ್ಲೂ ಹೋಗಬೇಡಿ ಅಂತ ಅಡ್ಡಿ ಮಾಡೋಲ್ಲ.

ಸುಬ್ಬ, ಆಚಾರಿ ಇಬ್ಬರೂ ನದಿ ಸೇತುವೆ ಮೇಲೆ ನಡೆದರು. ಹಿತವಾಗಿ ಬೀಸ್ತಿರೋ ತಂಗಾಳಿ. ಸುಬ್ಬ ಜೋಬಿನಿಂದ ದೊಡ್ಡ ಸಿಗರೇಟ್ ಪ್ಯಾಕ್ ತೆಗೆದು ಅದರಿಂದೊಂದು ಸಿಗರೇಟ್ ತೆಗೆದು ಬಾಯಗಿಟ್ಕೊಂಡು ಬೆಂಕಿ ಹಚ್ಕೊಂಡ. ಘಮ್ಮಂತ ವಾಸ್ನೆ ಹೊರಡ್ತು. ಆಚಾರಿ ಅತ್ಯಾಶ್ಚರ್ಯದಿಂದ ''ನಿನಗೇನು ಬಂತೋ ಕೇಡುಗಾಲ. ಈ ವಯಸ್ನಲ್ಲಿ ಈ ಅಭ್ಯಾಸ ಅದೂ ಪ್ಯಾಕು ಪ್ಯಾಕೇ ಇಟ್‌ಕೊಂಡಿದೀಯ'' ಅಂದ. ''ಇಲ್ಲಮ್ಮ ಪಿಂಟೂ ಅಮೆರಿಕಾದಿಂದ ಬಂದ್ನಲ್ಲ, ತಂದ್‌ಕೊಟ್ಟ... ಬಹಳ ಹಿಂದೆ ಸಿಗರೇಟ್ ಸೇದ್ತಿದ್ನಲ್ಲ... ತಗೋ ನೀನೂ ಒಂದು'' ಅಂದು ಆಫರ್ ಮಾಡಿದ. ಹಾವಾಡಿಗ ಹಾವನ್ನ ಮುಟ್ಟಿ ಅಂತ ಮುಂದೆ ತಂದಾಗ ಹಿಂದ್ಗಡೆ ಹೋಗುವಂತೆ ಆಚಾರಿ ಹಿಂದಕ್ಕೆ ಹೋದ. ಸುಬ್ಬ ಬಿಡ್ತಾನ್ಯೇ. ಬಲವಂತವಾಗಿ ಒಂದು ಕೊಟ್ಟ. ''ಒಂದೆರಡು ದಂ ಎಳೀಮ್ಮ ಆಮೇಲೆ ನೀನು ಇದೇ ಬ್ರಾಂಡ್‌ಗೆ ಅಂಟ್‌ಕೊಂಡ್ ಬಿಡ್ತೀಯ. ಸೇದ್ತಾ ಇದ್ರೆ ಯಾವುದೋ ಇಂಟರ್ ನ್ಯಾಷನಲ್ ಚಾಕೊಲೇಟ್ ತಿಂದ್ಹಾಗೆ ಆಗುತ್ತೆ'' ಅಂದ.

ಸರಿ ಆಚಾರಿ ತುಟಿ ಮಧ್ಯ ಸಿಗರೇಟ್ ಇಟ್ಕೊಂಡು ಬೆಂಕಿ ಹಚ್ಕೊಂಡು ಹೊಗೆ ಬಿಟ್ಟ, ಹೌದು ಇದು ಸಿಗರೇಟಲ್ಲ ಫಾರಿನ್ ಚಾಕೋಲೇಟು. ಬಹಳ ಮಧುರವಾಗಿತ್ತು ಆದರೂ ಹೊಗೆ ಸೊಪ್ಪಿನ ವಾಸನೆ ಬರದೇ ಇರುತ್ಯೇ.

ಆಚಾರಿಗೆ ಯೋಚನೆಗೆ ಇಟ್ಕೊಂಡು. ಸುಬ್ಬ ಬೆನ್ ತಟ್ಟಿ ''ಒಂದ್ ಸಿಗರೇಟ್ ಸೇರಿದ್ದಕ್ಕೆ ಯಾರನ್ನೊ ಕೊಲೆ ಮಾಡಿದೋನ ಹಾಗೆ ತಲೆ ಮೇಲೆ ಆಕಾಶ ಬಿದ್ದೋನ ಹಾಗೆ ಆಡ್ತಿದೀಯಲ್ಲೋ'' ಅಂದ.

''ನಿಂಗಿನ್ನು ನಮ್ಮನೆ ನಾಯಿ ಸಹವಾಸ ಗೊತ್ತಿಲ್ಲ'' ಅಂದ ಆಚಾರಿ ತುಟಿಯಾಡಿಸಿ

''ಯಾಕೆ... ನಾಯಿ ಏನು ಮಾಡುತ್ತೆ... ನೀನು ಸಿಗರೇಟು ಸೇದಿದ್ದು ನಾಯಿಗೂ ಗೊತ್ತಿಗುತ್ತಾ.''

''ನಾಯಿ ಅಂದಿದ್ದು ನಾಯಿನಲ್ಲ, ನನ್ ಹೆಂಡ್ತಿನ''

''ಯಾಕೋ ಹೆಂಡ್ತಿನ ನಾಯಿ ಅಂತೀಯ. ಹಾಗೆ ನೋಡಿದರೆ ಗಂಡಂದಿರೇ ನಾಯಿಗಳು. ಹೆಂಡ್ತೀರ ಹಿಂದ್ಗಿಂದೆ ಹೋಗ್ತಿರ್ತಾರೆ''

''ನಾನು ಅದಕ್ಕಲ್ಲ ಹೇಳಿದ್ದು ಸ್ವಲ್ಪ ಅಡ್ಡ ವಾಸನೆ ಬಂದರೂ ಕಂಡ್ ಹಿಡಿದ್‌ಬಿಡ್ತಾಳೆ.

''ಕಂಡ್ ಹಿಡೀಲಿ ಬಿಡು''

''ಆಮೇಲಿನ ಫಜೀತಿ ನಿಂಗೇನ್ ಗೊತ್ತು''

ಸುಬ್ಬ ಕಿಲ ಕಿಲಾಂತ ನಕ್ಕ

''ಅಮೇಲೆ ಅವಳು ಮುತ್ ಕೊಡಲ್ಲ ಅಂತಾನಾ. ವಾಸ್ನೆ ಹೋದ್ಮೇಲೆ ಇಸ್ಕೊ''

''ವಾಸ್ನೆ ಮನೆ ಹಾಳಾಯ್ತು... ಮುತ್ ಮನೆ ಮುಳುಗಿ ಹೋಯ್ತು... ಅವಳ್ನ ಸಮಾಧಾನ ಪಡಿಸಬೇಕಾದ್ರೆ ಸಾಕು ಸಾಕಾಗಿ ಹೋಗುತ್ತೆ''

''ಯಾಕೋ ಥೇಡ್ ತರ ಆಡ್ತೀಯ. ಮದ್ವೆ ಆಗಿ ಇಷ್ಟು ವರ್ಷ ಆಯ್ತು. ಒಂದ್ ಸಿಗರೇಟ್ ಸೇದೋ ಧೈರ್ಯ ಇಲ್ಲ ಅಂದ್ರೆ ಎಂಥಾ ಗಂಡಸೋ ನೀನು.''

''ಹೋಗ್ಲಿ ಬಿಡು. ಆ ವಿಚಾರ ಯಾಕೀಗ... ಅಂದ್ಹಾಗೆ ನೀನು ಅಮೆರಿಕಾಕ್ಕೆ ಹೋಗ್ತೀನಿ ಅಂದಿದ್ಯಲ್ಲ ಏನಾಯ್ತು''

''ಆಗೋದೇನು... ಮುಂದಿನ ತಿಂಗಳೇ ಹಾರ್ತೀನಿ'' ಅಂತ ಸುಬ್ಬ ಅಂತಿದ್ ಹಾಗೆ ಪಕ್ಕದಲ್ಲಿ ಕಾರು ಬಂದು ನಿಂತ್ಕೊಂಡ್ತು ಅದರಿಂದೊಂದು ವ್ಯಕ್ತಿ ಸುಬ್ಬನ ಜೊತೆ ಮಾತಾಡಿತು. ಸುಬ್ಬ ಆಮೇಲೆ

''ಆಚಾರೀನಾ ಬರ್ತಾನೆ... ನರಸಿಂಹನ ಮನೇಲಿ ಗುಂಡ್ ಪಾರ್ಟಿ ಇದ್ಯಂತೆ. ಬರೋ ಹಾಗಿದ್ರೆ ನೀನೂ ಬಾ'' ಅಂದ.

ಆಚಾರಿ ಬೇಡಪ್ಪ ಅಂದ್ಮೇಲೆ ಸುಬ್ಬ ಹೊರಟ.

ನಂತರ ಆಚಾರಿ ಮನೆ ಕಡೆ ಹೊರಟಾಗ ತನ್ನ ಉಸಿರನ್ನ ಕೈಮೇಲೆ ಬಿಟ್ಕೊಂಡು ನೋಡಿದ ವಾಸ್ನೆ ಬರ್ತಿತ್ತು. ವಾಸ್ನೆ ಹೋಗಕ್ಕೆ ಅಂತ ಒಂದು ಚಾಕಲೇಟ್ ತಗೊಂಡು ಆಗಿದಗಿದು ತಿಂದ. ಊಹೂಂ ವಾಸ್ನೆ ಹೋಗೇ ಇಲ್ಲ ದರ್ಶಿನಿಗೆ ಹೋಗಿ ಒಂದು ಬಿಸಿ ಕಾಫಿ ಕುಡಿದ. ಆಗ ಸಮಾಧಾನ ಈಗ ಬಾಯಿಂದ ಬರೀ ಕಾಫಿ ವಾಸ್ನೆ. ಅವಳು ಕೇಳಿದರೆ ಸುಬ್ಬ ಬೈಟೂ ಕಾಫಿ ಕೊಡಿಸಿದ ಅಂತ ಹೇಳ್ಬೇಕು ಅಂದ್ಕೊಂಡು ಮನೆಗೆ ಹೋಧ.

ಸಿಂಗಾರಮ್ಮ ಕಾಯ್ತಾ ಇದ್ದಳು. ಇದೇನೂಂದ್ರೆ ಹೀಗೆ ಮಾಡ್ಬಿಟ್ರಿ... ಎಷ್ಟು ಹೊತ್ತು ಮಾಡಿದ್ರಿ'' ಅಂದು ಕೈ ಹಿಡಿದು ಒಳಗೆ ಕರ್ಕೊಂಡ್ಳು.

ಅದೂ ಅದೂ ಅಂತ ಸುಳ್ಳು ಪೋಣಿಸಿದ. ಸಿಂಗಾರಮ್ಮ ಕಾಫಿ ಮಾಡಿ ತಾನೊಬ್ಬೆ ಕುಡಿತಾ ಕೂತಳು. ಇದೇನು ನನ್ನನ್ನ ಕಾಫಿ ಬೇಕಾ ಅಂತ ಕೂಡಾ ಕೇಳ್ಳಿಲ್ವಲ್ಲ ಅಂತ ಆಚಾರಿ ಅಚ್ಚರಿಗೊಂಡ.

''ಇದೇನೆ ಸಿಂಗಾರು... ನಂಗೆಲ್ಲೆ ಕಾಫಿ'' ಅಂದ.

''ಈಗ್ತಾನೆ ದರ್ಶಿನೀಲಿ ಸುರ್ಕೊಂಡ್ ಬಂದ್ರಲ್ಲ'' ಅಂದಳು ಆಚಾರಿ ಕುರ್ಚಿಯಿಂದ ಉರುಳಿದ. ಸಿಂಗಾರಮ್ಮ ಅವನ ಕಡೆ ಕೆಕ್ಕರಿಸ್ಕೊಂಡು ನೋಡಿದಳು.

''ಎಲ್ಲಿ ಆ ಸುಬ್ಬು'' ಅಂದಳು.

''ಸುಬ್ಬು ಎಲ್ಲೋ ಹೋದ ಯಾಕೆ...?''

ಈ ವಯಸ್ನಲ್ಲಿ ನಿಮಗೇನ್ರಿ ಬಂತು ದುರ್ಬುದ್ದಿ ಇವತ್ತು ಸಿಗರೇಟು, ನಾಳೆ ಹೆಂಡ, ನಾಡಿದ್ದು ಸೂಳೆ... ಬಹಳ ಚೆನ್ನಾಗಿದೆ. ನೀವೂ ನಿಮ್ಮ ಫ್ರೆಂಡ್ಸೂ''

''ಅಲ್ಲ, ಅಲ್ಲ ನೀನು ಏನು ಹೇಳ್ತಿದೀಯ''

''ನೀವು ಮಾಡಿದ ಘನಕಾರ್ಯ ಚಿಂಟೂ ಕಳಿಸಿದ್ದೆ ನೋಡ್ಕೊಂಬಾ ಎಲ್ ಹೋದ್ರು ಅಂತ. ಅದು ಬಂದು ವರದಿ ಒಪ್ಪಿಸಿದೆ. ನಿಮಗ್ಯಾರು ಹೇಳಿದ್ರು ಚಾಕಲೇಟು ತಿಂದು ಕಾಫಿ ಕುಡಿದ್ರೆ ಸಿಗರೇಟು ವಾಸ್ನೆ ಹೋಗುತ್ತೆ ಅಂತ.''

''ನಿನ್ ಮೂಗು ನಿಜವಾಗಿ ನಾಯಿ ಮೂಗು'' ಅಂದ ಆಚಾರಿ ಭಯಪಟ್ಕೊಂಡೇ. ''ಹೋಗಿ ಚೆನ್ನಾಗಿ ಸೋಪು ಹಚ್ಚಿ ಕೈ ತೊಳ್ಕೊಳಿ ಆ ನಿಮ್ಮ ಸುಬ್ಬ ಬರ್ಲಿ ಮಾಡ್ತೀನಿ'' ಅಂದಳು.

ಆಚಾರಿ ಹಣ ಚಚ್ಕೊಂಡು ಬಚ್ಚಲು ಮನೆಗೆ ಹೋದ.